# ಸಿದ್ಧಗಂಗಾ

ಸಂಪುಟ-32 ಸಂಚಿಕೆ-5-6 ಮೇ-ಜೂನ್-1996.



ತ್ರಿವಿಧ ದಾಸೋಹ ಮೂರ್ತಿಗಳಾದ ಪರಮಪೂಜ್ಯ

**ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ**

## ವಜ್ರಮಹೋತ್ಸವ ಪ್ರತಿಷ್ಠಾನ

**ಶ್ರೀ ಸಿದ್ಧಗಂಗಾ ಮಠ, ತುಮಕೂರು-572 104.**

* ಶ್ರೀ ಸಿದ್ಧಗಂಗೆ ಸಿದ್ಧಿಯ ತಾಣ. ನಾಡಿನಲ್ಲಿ ವಿದ್ಯೆ ದಾಸೋಹಕ್ಕೆ ಹೆಸರಾಗಿದೆ.
* ಇಲ್ಲಿಯ ಸೇವಾಕಾರ್ಯಗಳು ಸಾಗರವನ್ನು ಹೋಲುತ್ತವೆ.
* ವಿಶಿಷ್ಟಸೇವಾಕೇಂದ್ರವಾಗಿ ಬೆಳಗುತ್ತಿದೆ.
* ಶ್ರೀ ಶ್ರೀಗಳ ತ್ಯಾಗ ಮತ್ತು ನಿರಂತರ ಕ್ರಿಯಾಶೀಲತೆಯೇ ಪ್ರಗತಿಪಥದ ಬೆಳವಣಿಗೆಗೆ ಆಧಾರ.
* ಸೇವೆಯೇ ಅವರ ಬದುಕಿನ ದಿನಚರಿ. 89 ರ ಹರೆಯದಲ್ಲೂ ದಣಿವರಿಯದ ಬದುಕು ಅವರದಾಗಿದೆ.
* ಶ್ರೀ ಶ್ರೀಗಳವರ ಮಹಾ ಸಾಧನೆ ಮೇರು ಸದೃಶವಾಗಿದೆ.
* ಈ ಸಾಧನೆಯ ಪ್ರತೀಕವಾಗಿ ವಿಶ್ವ ಸ್ಮರಣೀಯ ಸ್ಮಾರಕಗಳು ನಿರ್ಮಾಣವಾಗಿವೆ. ಇವುಗಳ ವೆಚ್ಚ 6 ಕೋಟಿ ರೂಗಳು
* ಇವು ಶ್ರೀ ಶ್ರೀಗಳ ಮಹಾನ್‌ವ್ಯಕ್ತಿತ್ವ, ಸೇವಾತತ್ಪರತೆ ವಿದ್ಯಾಪ್ರಸಾರ ಮತ್ತು ಮಾನವೀಯ ಮೌಲ್ಯಗಳನ್ನು ಮುಂದಿನ ಜನಾಂಗಕ್ಕೆ ಶತಶತಮಾನಗಳ ಕಾಲ ಸಾರುತ್ತಾ ಸ್ಫೂರ್ತಿಯ ಬೆಳವಣಿಗೆಗೆ ನೆಲೆಯಾಗುತ್ತವೆ.
* 1997 ಫೆಬ್ರವರಿಯಲ್ಲಿ ವಜ್ರಮಹೋತ್ಸವ ಆಚರಿಸಿ ಬೃಹತ್‌ಸ್ಮಾರಕ ಭವನಗಳನ್ನು ಶ್ರೀಮಠಕ್ಕೆ ನಾಡಿನ ಭಕ್ತಕೋಟಿ ಕೃತಜ್ಞತಾ ಪೂರ್ವಕವಾಗಿ ಅರ್ಪಿಸುತ್ತಾರೆ.
* ಸರ್ವರ ಏಳಿಗೆಗೆ ಸಮಾನತೆಯ ಪ್ರತೀಕವಾಗಿರುವ ಶ್ರೀ ಶ್ರೀಗಳವರ ವಜ್ರ ಮಹೋತ್ಸವ ನಿಧಿಗೆ ನಾಡಿನ ಭಕ್ತಾದಿಗಳು ಶ್ರೀಮಠದಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳು ಉದಾರವಾಗಿ ಕಾಣಿಕೆ ನೀಡುವುದರೊಂದಿಗೆ ಯೋಜನೆಗಳು ಯಶಸ್ವಿಯಾಗಿ ಪೂರ್ಣವಾಗಲು ಕೋರುತ್ತೇವೆ.
* ಶ್ರೀ ಮಠದಲ್ಲಿ ಟಿ. ಸಿ. ಹೆಚ್. ತರಬೇತಿ ಪಡೆದ ಶಿಕ್ಷಕರು ಒಂದು ತಿಂಗಳ ವೇತನವನ್ನು 5-6 ಕಂತುಗಳಲ್ಲಿ ಅಧೀಕ್ಷಕರ ವಿಳಾಸಕ್ಕೆ ಕಳುಹಿಸಿಕೊಡಿ.

ಡಾ. ಎಂ. ಸಿ. ಮೋದಿ,
ಅಧ್ಯಕ್ಷರು.

ಬಿ.ಎಸ್. ಮುದ್ದಪ್ಪ, ಐ.ಎ.ಎಸ್.(ನಿ)
ಕಾರ್ಯಾಧ್ಯಕ್ಷರು.

ಎಸ್.ಎಸ್. ಹಸಬಿ, ಐ.ಪಿ.ಎಸ್(ನಿ.)
ಕಾರ್ಯದರ್ಶಿಗಳು.

# ಸಿದ್ಧಗಂಗಾ

ಸಂಪುಟ-32 ಸಂಚಿಕೆ-5-6 ಮೇ-ಜೂನ್-1996.

## ಶ್ರೀ ಸಿದ್ಧಗಂಗಾಗುರುಕರುಣ ತ್ರಿವಿಧಿ

ಬಸವ ಬೋಧೆಯು ಜಗಕೆ ಹೊಸದೃಷ್ಟಿ ನೀಡಿಹುದು
ಹಸನಹುದು ಬದುಕು ಅರಿತರೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ನೆಲದಾಳದಿ ಹುದುಗಿರುವತಿಳಿಜಲನ ತೆಗೆವಂತೆ
ಮಲಿನಮನದೊಳಗಿನ ಕತ್ತಲೆಗೆ । ಬೆಳಕೀವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಮಡಿ ಮಡಿ ಎನುತಿರುವ "ನುಡಿವರ್ಗ" ಜನರೊಳಗೆ
ಕಡೆ ಕಡೆ ಮನದೊಳಗೆ ಎನುತಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥



–ಹೆಚ್. ವಿ. ವೀರಭದ್ರಯ್ಯ



# ಶ್ರೀ ವಾ ಣಿ

## ಯಾರು ಜಾಣರು

ಒಮ್ಮೆ ಮೂವರು ಸ್ನೇಹಿತರು ಪ್ರಯಾಣ ಮಾಡುತ್ತಿದ್ದರು. ಹತ್ತಾರು ಮೈಲಿಗಳನ್ನು ಕ್ರಮಿಸಿ ಒಂದು ಮಾವಿನ ಮರದ ನೆರಳಿನಲ್ಲಿ ವಿಶ್ರಮಿಸಿಕೊಳ್ಳಲು ಕುಳಿತರು. ಮಾವಿನಮರ ಸೊಂಪಾಗಿ ಬೆಳೆದಿತ್ತು. ನೆರಳು ವಿಶಾಲವಾಗಿ ಹಬ್ಬಿತ್ತು. ಮರದ ತುಂಬಾ ಹಣ್ಣು ಬಿಟ್ಟಿದ್ದವು. ಒಳ್ಳೆಯ ಬಣ್ಣಕ್ಕೆ ಬಂದಿದ್ದವು, ಹದವಾಗಿದ್ದವು. ನೋಡುವವರ ಬಾಯಲ್ಲಿ ನೀರೂರುವಂತೆ ರಸ ತುಂಬಿ ತೂಗುತ್ತಿದ್ದವು. ಮೂವರು ಸ್ನೇಹಿತರೂ ಹಣ್ಣುಗಳನ್ನು ನೋಡಿದರು. ಮಾತಿಗೆ ಪ್ರಾರಂಭಿಸಿದರು. ಒಬ್ಬನೆಂದ ಇಷ್ಟು ಸಂವೃದ್ಧವಾಗಿ ಮರ ಬೆಳೆಯ ಬೇಕಾದರೆ ಈ ಮಣ್ಣಿನ ಗುಣವೇ ಕಾರಣವಿರಬೇಕು. ಕಾಲ ಕಾಲಕ್ಕೆ ಮಳೆ ಬಂದಿರಬೇಕು. ಮರದ ಮಾಲಿಕ ದನ ಕರುಗಳಿಂದ ಮರ ಹಾಳಾಗದಂತೆ ಸಂರಕ್ಷಣೆ ಮಾಡಿಕೊಂಡು ಬಂದಿರುವುದರಿಂದಲೇ ಇಷ್ಟೊಂದು ದೊಡ್ಡದಾಗಿ ಬೆಳೆದು ಹಣ್ಣು ಬಿಟ್ಟಿರಬೇಕು. ಈ ಮಣ್ಣಿನ ಪರೀಕ್ಷೆಮಾಡಿ ನೋಡಿದರೆ ಇದರ ಗುಟ್ಟು ತಿಳಿದೀತು ಎಂಬುದಾಗಿ ಹೇಳುತ್ತಿದ್ದಂತೆಯೇ ಮತ್ತೊಬ್ಬ ಇಲ್ಲ ಮರವೇನು ಯಾವ ಮಣ್ಣಿನಲ್ಲಿ ಬೆಳೆಸಿದರೂ ಬೆಳೆಯುತ್ತದೆ. ಹಣ್ಣಿನ ಬಣ್ಣಕ್ಕೆ ರಸವಂತಿಕೆಗೆ, ಗಾತ್ರಕ್ಕೆ ಕಾರಣವಾಗಿರುವುದು ಇನ್ನೇನೋ ಇರಬೇಕು. ಬಹುಶಃ ವಾತಾವರಣದ ಪರಿಣಾಮದಿಂದಾಗಿ ಹೀಗೆ ಬೆಳೆದಿರಬೇಕು ಎಂಬುದಾಗಿ ಹೇಳಿದ. ಇನ್ನೊಬ್ಬ ಇವರಿಬ್ಬರ ಮಾತುಗಳನ್ನು ಕೇಳಿಸಿಕೊಂಡರೂ ಮರು ಮಾತಾಡದೆ ಸುಮ್ಮನೆ ಮರಹತ್ತಿ ರುಚಿಕಟ್ಟಿದ ಹಣ್ಣನ್ನು ಕಿತ್ತು ತಿಂದೇಬಿಟ್ಟ.

ಇಂದು ಬುದ್ಧಿ ಜೀವಿಗಳು, ವಿದ್ವಾಂಸರು, ಹಲವು ಸಮಸ್ಯೆಗಳನ್ನು ಕುರಿತು ಚಿಂತನೆ, ವಾದ-ವಿವಾದ, ಚರ್ಚೆಗಳನ್ನು ನಡೆಸುತ್ತಿರುವುದನ್ನು ಕಾಣುತ್ತಿದ್ದೇವೆ. ಹಿರಿಯರು ನಮಗೆ ಕೊಟ್ಟು ಹೋಗಿರುವ ಜೀವನ ಸಂದೇಶವನ್ನು ಸರಿಯಾಗಿ ಗ್ರಹಿಸುವಲ್ಲಿ ಮುಗ್ಗರಿಸುತ್ತಿದ್ದೇವೆ. ಮೂಲಭೂತವಾದ ಸಾರವನ್ನು ಬಿಟ್ಟು ಮೇಲಿನ ಗರಿಯನ್ನಷ್ಟೆ ತಿನ್ನುವುದರಲ್ಲಿ ಮಗ್ನರಾಗಿದ್ದೇವೆ. ಉದಾ || ಬಸವಾದಿ ಶರಣರ ಜೀವನ ಸಿದ್ಧಾಂತವನ್ನು ಅನುಷ್ಠಾನಕ್ಕೆ ತರುವುದಕ್ಕಿಂತ ವೀರಶೈವ, ಲಿಂಗಾಯಿತ ಶಬ್ದಗಳನ್ನು ಅರ್ಥೈಸುವುದರಲ್ಲಿ, ವಿಶ್ಲೇಷಣೆ ಮಾಡುವುದರಲ್ಲಿ ಆಸಕ್ತರಾಗಿದ್ದೇವೆ. ಅಣ್ಣನವರೇ ಹೇಳಿರುವಂತೆ "ಗೀತವ ಬಲ್ಲಾತ ಜಾಣನಲ್ಲ", ಮಾತು ಬಲ್ಲಾತ ಜಾಣನಲ್ಲ, ಜಾಣನು ಜಾಣನು ಆತ ಜಾಣನು ಲಿಂಗವ ನೆರೆನಂಬಿದಾತ ಜಾಣನು. ಜಂಗಮಕ್ಕೆ ಧನವ ಸವೆಸಿದಾತ ಜಾಣನು. ಜವನ ಬಾಯಲು ಬಾಲವ ಕೊಯ್ದು ಹೋದಾತ ಆತ ಜಾಣನು ನಮ್ಮ ಕೂಡಲಸಂಗನ ಶರಣನು" ಎಂಬುದನ್ನು ಮರೆಯುತ್ತಿದ್ದೇವೆ. ಶರಣರು ಕೊಟ್ಟು ಹೋಗಿರುವ ಕಾಯಕ ಮತ್ತು ದಾಸೋಹದಂಥ ಸಾರ್ವಕಾಲಿಕ ತತ್ವಗಳನ್ನು ಆಚರಣೆಗೆ ತರುವಲ್ಲಿ ಯಾವ ಮಾರ್ಗವನ್ನು ಅನುಸರಿಸಬೇಕು, ಜನ ಜಾಗೃತಿಗೆ ಪ್ರಯತ್ನಿಸಬೇಕು, ಮಾನವೀಯತೆಯನ್ನು ಬಿತ್ತಿ ಬೆಳೆಯುವಂಥ ಪರಿಸರ ನಿರ್ಮಾಣಕ್ಕೆ ಶ್ರಮಿಸಬೇಕೆಂಬುದರ ಕಡೆಗೆ ಆದ್ಯ ಗಮನ ಹರಿಸಬೇಕಾಗಿರುವುದೀಗ ಅನಿವಾರ್ಯದ ತುರ್ತು ಎಂಬುದನ್ನು ಗಂಭೀರವಾಗಿ ಪರಿಗಣಿಸಬೇಕು.

ಚಿಂತನೆ, ವಾದ-ವಿವಾದ, ಚರ್ಚೆ, ಸಂಶೋದನೆಗಳೆಲ್ಲ ಅಗತ್ಯ. ಅವು ಬೇಡವೆಂದಲ್ಲ. ಅವುಗಳ ಗುರಿ ಮಾತ್ರ ಸಮಷ್ಟಿ ಜೀವನದ ಕಲ್ಯಾಣದ ಕಡೆಗೆ ಮುಖಮಾಡುವುದು ಅಪೇಕ್ಷಣೀಯ ಹಾಗೂ ಸ್ವಾಗತಾರ್ಹ.

(16-5-96ರಂದು ಮಾಲೂರಿನಲ್ಲಿ ನಡೆದ ಬಸವಜಯಂತಿ ಸಂದರ್ಭದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ.)

## ಶ್ರೀ ಸಿದ್ಧಲಿಂಗೇಶ್ವರ ವಚನ

ಅರಿವಿನ ಕುರುಹನರಿಯದೆ
ತನುವ ಕರಗಿಸಿ ಮನವ ಬಳಸಿದರೆ ಏನು ಪ್ರಯೋಜನವೊ?
ಇಂದ್ರಿಯ ನಿಗ್ರಹಮಾಡಿ
ವಿಷಯಂಗಳ ಬಂಧಿಸಿ
ಆತ್ಮಂಗೆ ಬಂಧನವ ಮಾಡಿದರೆ
ಆತ್ಮದ್ರೋಹ ಕಾಣಿಭೋ
ಹೀಗೆ ಉದ್ದೇಶದಿಂದ ತನುವ ಒಣಗಿಸಿದರೆ
ಹಸಿಯ ಮರನ ತರಿದು ಬಿಸಿಲಿಗೆ ಹಾಕಿದಂತೆ
ತನು ಒಣಗಿದರೇನಯ್ಯಾ? ಮನದ ಮಲಿನ ಹಿಂಗದು
ಮನದ ಮಲಿನ ಹಿಂಗದನ್ನಕ್ಕರ
ಭವ ಹಿಂಗಿತ್ತೆಂಬ ಭಂಡರನೇನೆಂಬೆನಯ್ಯಾ?
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ!

ಅಂಗದ ಮೇಲೆ ಧರಿಸಿಕೊಂಡ ಲಿಂಗವೆಂದರೆ ಅದು ಜ್ಞಾನದ ಕುರುಹಾಗಿರುವುದು. ಅಂತಹ ಕುರುಹನ್ನು ಹಿಡಿಯುವುದು ತನ್ನ ನಿಜ ಸ್ವರೂಪದ ಅರಿವನ್ನು ಪಡೆಯುವುದಕ್ಕಾಗಿಯೇ. ಹೀಗಿದ್ದಾಗ ಅರಿವನ್ನೇ ಮರೆತು ಕೇವಲ ಶರೀರ ಇಂದ್ರಿಯಾದಿಗಳನ್ನು ಬಂಧಿಸಿ ಅವುಗಳನ್ನು ತೊಂದರೆಗಳಿಗೀಡುಮಾಡುವುದು ಆತ್ಮ ದ್ರೋಹವೇಸರಿ.

ಮನಸ್ಸಿನಲ್ಲಿ ತುಂಬಿಕೊಂಡ ವಿಷಯವಾಸನೆಗಳನ್ನು ದೂರ ಮಾಡಿಕೊಳ್ಳದೆ ಕೇವಲ ಶರೀರಾದಿಗಳಿಗೆ ಪೀಡೆಕೊಡುತ್ತ ಸಂಸಾರವನ್ನು ದಾಟುವೆವೆಂದು ಹೇಳುವವರೆಲ್ಲರೂ ಮೂರ್ಖರೇ ಆಗುವರು.

[ಕೃಪೆ:- ಷಟ್‌ಸ್ಥಲ ಜ್ಞಾನಸಾರಾಮೃತ. ಶ್ರೀ ತೋ.ಸಿ.ಕ್ಟೆಂ.ಸೇ.ಸಂ. ಎಡೆಯೂರು-ಗದಗ.]

### ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 31ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

# ಸಂಪಾದಕೀಯ

**ಎಲೆಮರೆಯ ಹೂವುಗಳು :–**

ಒಂದು ಮನೆ, ಒಂದು ಸಂಸ್ಥೆ, ಒಂದು ಮಠದ ಅಸ್ತಿತ್ವ ನಿಂತಿರುವುದು ಅಲ್ಲಿಯ ಸೇವಾಕರ್ತರ ಸಹಕಾರದ ಮೇಲೆ. ಮನೆಯ ಯಜಮಾನನಾದವನು ಸಮಾಜದಲ್ಲಿ ಗಣ್ಯನಾಗುವುದು ಆ ಮನೆಯ ಗೃಹಿಣಿಯ ನಿಷ್ಕಾಮ ಸೇವೆಯ ಫಲದಿಂದ. ಸಂಸ್ಥೆಯ ಪ್ರಗತಿ ಸದಸ್ಯರ ವಿನಯ ಸೌಜನ್ಯ ಪೂರಿತ ಸಹಕಾರದಿಂದ. ಮಠದ ಪ್ರಗತಿ ಅಲ್ಲಿ ಲೋಕ ಕಲ್ಯಾಣದ ದೃಷ್ಟಿಯಿಂದ ತನ್ನನ್ನೇ ಸಮರ್ಪಿಸಿಕೊಂಡ ಮಠಾಧಿಕಾರಿಗಳ ಕೈಂಕರ್ಯದಲ್ಲಿ ಸಹಕರಿಸುತ್ತ ನಡೆದ ಸಿಬ್ಬಂದಿಯ ದುಡಿಮೆಯಿಂದ.

ಶ್ರೀ ಸಿದ್ಧಗಂಗಾಮಠದ ತ್ರಿವಿಧ ದಾಸೋಹ ಸೇವೆ ಪುಣ್ಯಪುರುಷರಾದ ಪೂಜ್ಯ ಶ್ರೀ ಶ್ರೀಗಳವರ ಮಾರ್ಗದರ್ಶನದಲ್ಲೇ ನಡೆಯುತ್ತಿದೆ. ಸೇವೆಯಲ್ಲಿ ಸಹಕರಿಸುತ್ತಿರುವ ವಿವಿಧ ಸಿಬ್ಬಂದಿವರ್ಗದವರ ಶ್ರಮವನ್ನು ಶ್ರೀಗಳವರು ಮನಗಂಡು ಅವರೆಲ್ಲರ ಸೇವೆಯನ್ನು ಸಂದರ್ಭೋಚಿತವಾಗಿ ಸ್ಮರಿಸುವುದರ ಮೂಲಕ ಸೇವೆಯ ಅಂತರಾರ್ಥ, ಮಹತ್ವಗಳ ಪರಿಚಯವನ್ನು ಜನತೆಗೆ ಮಾಡಿಕೊಡುತ್ತಾರೆ. ಸಂಸ್ಥೆಯ ಅಭ್ಯುದಯದಲ್ಲಿ ಅವರುಗಳಿಂದ ಸಂದಿರುವ ಸೇವೆಯನ್ನು ಸ್ಮರಿಸುತ್ತಾರೆ. ಮಠದ ಅಭಿವೃದ್ಧಿಗೆ ಕಾರಣರಾದ ಅಸಲೀಪುರದ ಲಿಂಗೈಕ್ಯ ಚಿಕ್ಕಣ್ಣನವರನ್ನು, ಲಿಂಗೈಕ್ಯರಾಗಿರುವ ಶ್ರೀಮತಿ ಭೈರಮ್ಮಜ್ಜಿಯವರನ್ನು ಸ್ಮರಿಸುವಂತೆಯೇ, ಬೆಟ್ಟದ ಮೇಲೆ ಪೂಜೆಮಾಡಿಕೊಂಡಿದ್ದ ಲಿಂಗೈಕ್ಯ ಗಂಗಾಧರದೇವರನ್ನು, ಹಳೇಮಠದಲ್ಲಿ ಎಡೆ ಸಿದ್ಧಮಾಡುತ್ತಿದ್ದ ಲಿಂಗೈಕ್ಯ ನಂಜಪ್ಪನವರನ್ನು, ಎಮ್ಮೆ ಕಾಯುತ್ತಿದ್ದ ಲಿಂಗೈಕ್ಯ ಮುಗ್ಧ ಸುಬ್ಬಣ್ಣ ತಾತನವರನ್ನು, ಸಂಸ್ಕೃತ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸುತ್ತಿದ್ದ ದಿವಂಗತ ವಿದ್ವಾನ್ ವಿಶ್ವನಾಥ ಭಟ್ಟರನ್ನು, ಎಲ್ಲಕ್ಕೂ ಹೆಚ್ಚಿನದಾಗಿ ಅಡಿಗೆಮನೆಯಲ್ಲಿ ಪ್ರಸಾದ ಸಿದ್ಧಪಡಿಸುವ ಬಂಧುಗಳನ್ನು ನೆನೆಯುತ್ತಲೇ ಇರುತ್ತಾರೆ. ಐದುಸಾವಿರ ಮಕ್ಕಳಿಗೆ, ಜತೆಗೆ ಕ್ಷೇತ್ರಾರ್ಥಿಗಳಾಗಿ ಬರುವ ಭಕ್ತಾದಿಗಳಿಗೆ ಕಾಲ ಕಾಲಕ್ಕೆ ವಿಶೇಷ ಸಂದರ್ಭದಲ್ಲಿ ಅವರ ವೇಳೆಯಲ್ಲಿಯೂ ಪ್ರಸಾದ ಸಿದ್ಧಪಡಿಸುವ 'ಪಾಕ ಪುಣ್ಯಶೀಲ'ರ ಸೇವೆಯನ್ನು ಪ್ರಶಂಶಿಸುವಲ್ಲಿ ಸಂತೋಷಪಡುತ್ತಾರೆ. "ಪ್ರಸಾದದಲ್ಲಿ ರುಚಿಯನರಸಬಾರದು" ಎಂದು ಶರಣರು ಅಪ್ಪಣೆ ಕೊಡಿಸಿರುವರಾದರೂ ಪ್ರಸಾದ 'ಅಹಿತ'ವಾಗಿರದಂತೆ 'ತೃಪ್ತಿ'ಯನ್ನೀಯುವಂತಿರುವಲ್ಲಿ ಎಚ್ಚರವಹಿಸುವ ಅಡಿಗೆಯವರ ಶ್ರದ್ಧೆಯನ್ನು ಹೃದಯವಂತರೆಲ್ಲ ಮೆಚ್ಚಲೇ ಬೇಕಾಗುತ್ತದೆ. ಸದಾಕಾಲ ಒಲೆಯ ಮುಂದೆ ಬೆಂಕಿಗೆ ಮೈಯೊಡ್ಡಿ ದುಡಿಯುವುದೆಂದರೆ ಶಿವಾನುಭವಗೋಷ್ಠಿಯ ಚರ್ಚೆಯಲ್ಲಿ ಭಾಗವಹಿಸುವಂತಲ್ಲ, ತಾಳ್ಮೆ ಮತ್ತು ಎಚ್ಚರ ಎರಡೂ ಬೇಕು. ಎಡುಸಿಮಿಷ

ಆಲಸ್ಯ ಮಾಡಿದರೆ ಸಾವಿರಾರುಜನ ಊಟ ಮಾಡದಂತಾಗುತ್ತದೆ. ಅನ್ನ ಅರೆ ಬೇಯದಂತೆ, ಮುದ್ದೆ ಗಂಟುಬೀಳದಂತೆ, ಸಾರು ಸೀದುಹೋಗದಂತೆ ನೋಡಿಕೊಳ್ಳುವಲ್ಲಿ "ಅವಧಾನಭಕ್ತಿ" ಬೇಕಾಗುತ್ತದೆ. ಊಟಮಾಡಿದ ಶರಣರತೃಪ್ತಿಯ ಸವಿನುಡಿಯಲ್ಲಿ "ಕಾಯಕಸಂದಿತ್ತು" ಎನ್ನಬೇಕಾಗುತ್ತದೆ. ಶ್ರೀ ಮಠದ ಸೇವೆಯಲ್ಲಿ ಪ್ರಸಾದ ಸಿದ್ಧತೆಯಲ್ಲಿರುವವರ ಪಾತ್ರ ತುಂಬ ಮಹತ್ವಪೂರ್ಣವಾದುದು.

ಶ್ರೀಗಳವರ ವಾಹನದ ಚಾಲಕಸೇವೆಯಲ್ಲಿರುವ ಡ್ರೈವರ್ ರಾಜುವಿನ ಸೇವೆಯೂ ಜವಾಬ್ದಾರಿಯುತವಾದುದು, ಅಮೂಲ್ಯವಾದುದು. ಪೂಜ್ಯರ ಸೇವಾ ಕ್ಷೇತ್ರ ಸೀಮಿತವಾದುದಲ್ಲ. ಬಹುವ್ಯಾಪಕ. ಕರ್ನಾಟಕದ ಉದ್ದಗಲದಲ್ಲಿ ಸಂಚರಿಸುತ್ತಾರೆ. ಸಂಚಾರ ವೇಳೆಗೆ ಹಗಲು-ಇರುಳುಗಳೆಂಬ ವ್ಯತ್ಯಾಸವಿಲ್ಲ. ಸಂಜೆ ಮುಂಜಾನೆಗಳೆಂಬ ಲೆಕ್ಕವಿಲ್ಲ, ಹಳ್ಳಿದಿಳ್ಳಿಗಳೆಂಬ ಭೇದವಿಲ್ಲ. ರಾಷ್ಟ್ರೀಯ ಹೆದ್ದಾರಿಯಲ್ಲೂ ಸಂಚರಿಸುವಂತೆ ಎತ್ತಿನ ಗಾಡಿಯ ಜಾಡಿನಲ್ಲೂ ಸಂಚರಿಸುವುದುಂಟು. ಕಾರಿನ ಡ್ರೈವರ್‌ನದು ಮಾತ್ರ ಎಚ್ಚರದ ಸೇವೆ. ಸುಮಾರು ಮುವತ್ತು ವರ್ಷಗಳಿಂದ ಶ್ರೀಗಳವರ ಕಾರು ನಡೆಸುತ್ತ ಬಂದಿದ್ದರೂ ಒಂದೇ ಒಂದು ಆಕಸ್ಮಿಕವಾಗಲಿ, ಅಪಘಾತವಾಗಲಿ ಎದುರಾಗದಂತೆ ಶ್ರದ್ಧಾಭಕ್ತಿಯ ಸೇವೆಸಲ್ಲಿಸಿದ್ದಾನೆ. ಹೊಗಳಿಕೆ, ಪ್ರಶಂಸೆಗಳಿಗಾಗಿ ಈ ಮಾತುಗಳಲ್ಲ, ರಾತ್ರಿವೇಳೆಯಲ್ಲಿ ಪ್ರಯಾಣಿಸುವಾಗ ವಾಹನಗಳ ದಟ್ಟಣೆಯಲ್ಲಿ ಒಂದು ಸೆಕೆಂಡ್ ತೂಕರಿಸಿದರೆ ಏನಾದೀತು ಎಂಬುದನ್ನು ಊಹಿಸಲೂ ಆಗದು. ಪೂಜ್ಯ ಪಾದರ ಸಂಸ್ಮರಣೀಯ ಸೇವೆಯದು ಲೋಕ ಕಲ್ಯಾಣದಲ್ಲಿ ಎಲೆಮರೆಯ ಹೂವಿನಂತೆ ಸಿಬ್ಬಂದಿಯವರ ಸೇವೆಯೂ ಪರಿಮಳಿಸುತ್ತಿರುವುದನ್ನು ಯಾರೂ ಕಾಣಬಹುದು.

ಗ್ರಾಮಾಂತರ ಬಸವಜಯಂತಿ ಪೂಜ್ಯ ಶ್ರೀಗಳವರ ದೀರ್ಘತಪಸ್ಸಿನ ಫಲ. ಜನ ಜಾಗೃತಿಯ ಸಲುವಾಗಿ, ಸಮಾಜ ಸಂಘಟನೆಗಾಗಿ, ನಿಷ್ಕ್ರಿಯ ಜನತೆಯನ್ನು ಕ್ರಿಯಾಶೀಲರನ್ನಾಗಿಸುವುದಕ್ಕಾಗಿ ರೂಪುಗೊಂಡ ಯೋಜನೆ. ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕ ಯೋಜನೆಯ ಪ್ರಮುಖ ಅಂಗ. ನಾಟಕದ ಸಂಗೀತ ನಿರ್ದೇಶಕರಾಗಿ ಸೇವೆಸಲ್ಲಿಸುತ್ತಿರುವ ವಿದ್ವಾನ್ ಶ್ರೀ ಕೆ.ಎನ್. ವೆಂಕಟರಾಮಯ್ಯನವರು ಸ್ಮರಣೀಯರು. ಆಚಾರವಂತರು ನೈಷ್ಠಿಕ ಧರ್ಮಶೀಲರು. ಬಸವ ಭಕ್ತಿಯಲ್ಲಿ ಆನಂದವನ್ನನುಭವಿಸುವ ಸಹೃದಯರು. ಶ್ರೀಗಳವರ ಈ ಯೋಜನೆಯನ್ನು ಬಸವದರ್ಶನ ಯಾತ್ರೆಯೆಂದೇ ಪರಿಭಾವಿಸಿ ಗೌರವ ಭಾವನೆಯಿಂದ ಸೇವೆಸಲ್ಲಿಸುತ್ತಿರುವವರು. ಕಲಾವಿದರ ಮನೋಧರ್ಮಕ್ಕನುಗುಣವಾಗಿ ಮಾರ್ಗದರ್ಶನ ಮಾಡುತ್ತಿರುವ ಸುಸಂಸ್ಕೃತರು. ಪೂಜ್ಯ ಶ್ರೀಗಳವರಲ್ಲಿ ಮಾಹೇಶ್ವರ ನಿಷ್ಠೆಯುಳ್ಳವರು.

ಮರದೊಡ್ಡದು, ನೆರಳನ್ನಾಶ್ರಯಿಸಿ ಬರುವವರು ಸಾವಿರಾರು ಮಂದಿ. ಮಠದ ಸೇವೆಯೂ ಅಗಣಿತವೇ, ಮರದಬುಡ ಪೂಜ್ಯ ಶ್ರೀಗಳವರು. ರೆಂಬೆ ಕೊಂಬೆಗಳು ಹಬ್ಬಿ ಹರಡಿರುವೆ. ಕೊಂಬೆ ಕೊಂಬೆಯಲ್ಲಿ ಟೊಂಗೆ ಟೊಂಗೆಗಳು ಎಲೆಗಳು. ಎಲೆಗಳ ಮರೆಯಲ್ಲಿ ಹೂವುಗಳು. ಇದನ್ನರಿತ ವಿಚಾರಶೀಲರು, ಸುಸಂಸ್ಕೃತರು. ಮರದ ಬುಡಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ" ಎಂದು ಶ್ರೀಗಳವರ ಸೇವಾ ಮಣಿಹದಲ್ಲಿ ಕೈಜೋಡಿಸುತ್ತಿರುವುದು ನಾಡಿನ ಭಾಗ್ಯ. ಯುಗದಪುಣ್ಯ.

ಓಂ



ತ್ರಿವಿಧ ದಾಸೋಹ ಮೂರ್ತಿಗಳೂ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮ ಪೂಜ್ಯ

ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ

# 89ನೇ ಜನ್ಮ ದಿನೋತ್ಸವ

## ಶ್ರೀ ಗುರುವಂದನ ಸಮಾರಂಭ

**7ನೇ ಜುಲೈ 1996 ಭಾನುವಾರ ಬೆಳಿಗ್ಗೆ 10 ಘಂಟೆಗೆ**

ದಿವ್ಯಸಾನಿಧ್ಯ : ಶ್ರೀ ನಿ. ಪ್ರ. ಸ್ವ.

**ಚರಮೂರ್ತಿ ಕಾಲಾಗ್ನಿ ಶ್ರೀ ರುದ್ರಮುನಿಸ್ವಾಮಿಗಳು**

ಮಠಾಧ್ಯಕ್ಷರು, ಮರಳೇಗವಿಮಠ, ಕನಕಪುರ-ತಾಲ್ಲೂಕು, ಬೆ.ಗ್ರಾಂ. ಜಿಲ್ಲೆ.

ಉದ್ಘಾಟನೆ :

**ಸನ್ಮಾನ್ಯ ಶ್ರೀ ಈ. ಎಸ್. ವೆಂಕಟರಾಮಯ್ಯ**

ನಿವೃತ್ತ ಪ್ರಧಾನ ನ್ಯಾಯಾಧೀಶರು, ಭಾರತ ಸರ್ವೋನ್ನತ ನ್ಯಾಯಾಲಯ.

ಅಧ್ಯಕ್ಷತೆ :

**ಸನ್ಮಾನ್ಯ ಶ್ರೀ ಎ. ಜೆ. ಸದಾಶಿವ**

ನ್ಯಾಯವಾದಿಗಳು, ಕರ್ನಾಟಕ ಉಚ್ಚನ್ಯಾಯಾಲಯ, ಬೆಂಗಳೂರು.

ಭಕ್ತಿ ಸಮರ್ಪಣೆ :

**ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು**

ಕಿರಿಯ ಶ್ರೀಗಳು, ಸಿದ್ಧಗಂಗಾಮಠ.

ಮುಖ್ಯ ಅತಿಥಿಗಳು :

**ಸನ್ಮಾನ್ಯ ಶ್ರೀ ಸಿ. ಎನ್. ಭಾಸ್ಕರಪ್ಪ,**
ಲೋಕಸಭಾ ಸದಸ್ಯರು, ತುಮಕೂರು.

**ಸನ್ಮಾನ್ಯ ಶ್ರೀ ಎಸ್. ಶಿವಣ್ಣ,**
ವಿಧಾನ ಸಭಾ ಸದಸ್ಯರು, ತುಮಕೂರು.

**ಸನ್ಮಾನ್ಯ ಶ್ರೀ ಕೆ. ಮಲ್ಲಣ್ಣ,**
ವಿಧಾನ ಪರಿಷತ್ ಸದಸ್ಯರು, ತುಮಕೂರು.

**ಸ್ಮರಣೀಯ ಸಮಾರಂಭದಲ್ಲಿ**

**: ಗಣ್ಯರ ಸನ್ಮಾನ :**

**ಶ್ರೀ ಎನ್. ಆರ್. ಶೆಟ್ಟಿ,**
ಉಪ-ಕುಲಪತಿಗಳು, ಬೆಂಗಳೂರು ವಿಶ್ವವಿದ್ಯಾಲಯ.

**ಶ್ರೀ ಎಸ್. ರೇವಣ್ಣ,**
ಮಾಜಿ ಸಚಿವರು, ಸಾಗರನಹಳ್ಳಿ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ.

**ಡಾ. ಶ್ರೀ ಎಂ. ಚಿದಾನಂದಮೂರ್ತಿ,**
ಅಧ್ಯಕ್ಷರು, ಕನ್ನಡ ಶಕ್ತಿ ಕೇಂದ್ರ, ಬೆಂಗಳೂರು.

**ಶ್ರೀ ಎಂ. ಲಕ್ಷ್ಮೀನಾರಾಯಣ,**
ಗ್ರಾಮ ಪಂಚಾಯಿತಿ ಅಧ್ಯಕ್ಷರು, ಬೂದಿಗೆರೆ, ದೇವನಹಳ್ಳಿ ||ತಾ||, ಬೆಂ.ಗ್ರಾ.ಜಿಲ್ಲೆ.

**ಈ ಮಂಗಳ ಸಮಾರಂಭದಲ್ಲಿ ನಾಡಿನ ಅನೇಕ ಮಠಾಧಿಪತಿಗಳು, ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು ಮತ್ತು ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಗಣ್ಯರು ಪಾಲ್ಗೊಳ್ಳುತ್ತಾರೆ.**

**ಸರ್ವರಿಗೂ ಆದರದ ಸುಸ್ವಾಗತ.**

ಪೂಜ್ಯ ಶ್ರೀ ಶ್ರೀಗಳವರ ಜನ್ಮದಿನೋತ್ಸವ ಸಮಿತಿ
ಶ್ರೀ ಸಿದ್ಧಗಂಗಾ ಮಠ.

# ಬಸವಣ್ಣನವರು ಮತ್ತು ಭಕ್ತಿ ಮಾರ್ಗ

ಡಾ|| ಸರ್ಜಾ ಚಂದ್ರಶೇಖರಯ್ಯ, ಬಿ.ಬಿ. ರಸ್ತೆ, ಶಿವಮೊಗ್ಗ-577202.

ಮಾನವನು ಬಹಳ ಸಂಕಷ್ಟದಲ್ಲಿದ್ದು ಅದು ಮಾನವನಿಗೆ ಪರಿಹರಿಸಿಕೊಳ್ಳಲು ಸಾಧ್ಯವಿಲ್ಲದಾಗ ಪರಮಾತ್ಮನನ್ನು ಮೊರೆಹೊಕ್ಕು ಮಾನಸಿಕ ಶಾಂತಿ ಸಾಮಾಧಾನ ತಂದು ಕೊಳ್ಳುವನು ಇದು ಭಕ್ತಿ ಮಾರ್ಗ. ಪಾರಮಾರ್ಥದಲ್ಲಿ ಭಕ್ತಿ, ಕರ್ಮ, ಜ್ಞಾನ, ಎಂಬ ಮೂರು ಮಾರ್ಗಗಳಿವೆ. ಅವರವರ ಸ್ವಭಾವಕ್ಕನುಸರಿಸಿ ಈ ಮೂರು ಯೋಗಗಳಲ್ಲಿ ಒಂದನ್ನು ಆರಿಸಿಕೊಳ್ಳುವರು. ಭಕ್ತಿ ಭಂಡಾರಿ ಬಸವಣ್ಣನವರು ಭಕ್ತಿ ಮಾರ್ಗವನ್ನು ಅನುಸರಿಸಿದರು. ಭಕ್ತಿಯ ಪಾರಮ್ಯವನು ಭಗವದ್ಗೀತೆಯ ಹನ್ನೆರಡನೆಯ ಅಧ್ಯಾಯವು ಎತ್ತಿ ಹಿಡಿಯುತ್ತದೆ. ನಾರದ ಭಕ್ತಿ ಸೂತ್ರದಲ್ಲಿ ಭಕ್ತಿಯ ಸೂಚಿತವಾಗಿದೆ. ಶ್ವೇತಾಶ್ವತರ ಉಪನಿಷತ್‌ನಲ್ಲಿ ಭಕ್ತಿಯ ಕುರುಹುಗಳು ಕಾಣಿಸುತ್ತವೆ. ಬಸವಣ್ಣನವರ ಜೀವನವನ್ನು ಸಮಗ್ರವಾಗಿ ವಿವೇಚಿಸಿದಾಗ ಭಕ್ತಿ ಮಾರ್ಗ ಎದ್ದು ಕಾಣುತ್ತದೆ ಬಸವಣ್ಣನವರು ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಬಿಜಾಪುರ ಜಿಲ್ಲೆಯ ಬಾಗೆವಾಡಿಯಲ್ಲಿ ಜನಿಸಿದರು. ಮಾದರಸ ಮತ್ತು ಮಾದಲಾಂಬಿಕೆಯರು ಅವರ ತಂದೆ ತಾಯಿಗಳು. ಶೈವಬ್ರಾಹ್ಮಣರಾಗಿದ್ದರು. ಬಾಲ್ಯದಲ್ಲಿಯೇ ತಮಗೆ ಕರ್ಮ ಮಾರ್ಗವು ಸರಿಹೊಂದುವದಿಲ್ಲವೆಂದು ನಿಶ್ಚಯಿಸಿ, ಭಕ್ತಿ ಮಾರ್ಗವನ್ನು ಹಿಡಿದರು. ತಮ್ಮ ಸಾಧನಕ್ಕೆ ಕೂಡಲ ಸಂಗಮವೇ ಪ್ರಶಸ್ತ ಸ್ಥಳವೆಂದು ತಿಳಿದು ತಮ್ಮ ಮತವನ್ನೂ ತಂದೆ ತಾಯಿ ಬಂಧು ಬಳಗವನ್ನು ತೊರೆದು, ಕೂಡಲ ಸಂಗಮಕ್ಕೆ ತೆರಳಿದರು. ಕೂಡಲಸಂಗಮವು ಕೃಷ್ಣಾ ಮತ್ತು ಮಲಪ್ರಭಾ ನದಿಗಳ ಸಂಗಮದಲ್ಲಿದೆ. ಅವರ ಭಕ್ತಿ ಸಾಧನೆಗೆ ಅದು ಪ್ರಶಾಂತವಾದ ತಾಣವಾಗಿತ್ತು. ಪ್ರತಿದಿನವೂ ಆಗ್ಗವಣಿ ಹೂವು ಪತ್ರೆಗಳಿಂದ ಸಂಗಮನಾಥನನ್ನು ಪೂಜಿಸುತ್ತಿದ್ದರು. ಪೂಜೆಯಲ್ಲಿ ಮಗ್ನರಾದಾಗ ತಮ್ಮ ದೇಹ ಭಾವವನ್ನು ಮರೆಯುತ್ತಿದ್ದರು. ಅವರು ಭಕ್ತಿಯಿಂದ ಪೂಜೆ ಮಾಡುವ ಪರಿಗಳನ್ನು ನೋಡಿ.

ನುತಶೀತಳಂಗಳಂ ಪೊಂಗಳಸದೊಳುತೀವಿ ಅತಿಶಯಾನಂದಾಶ್ರುವಂ ಕಣ್ಗಳೊಳು ತೀವಿ ಕೊಂಡಾಡಿ ಕೊಂಡಾಡಿ ಮಜ್ಜನಕ್ಕೆರೆವುತಂ ಮುಂಡಾಡಿ ಮುಂಡಾಡಿ ನೊಸಲೊಳ ಚ್ಚೊತ್ತುತಂ ಚಂದ್ರಚೂಡಂಗೆ ಸಿರಿಗಂಧ ನಸಲಂಕರಿಸಿ ಸಾಂದ್ರ ಸೌರಭ್ಯಮಯ ಪುಷ್ಪದಿಂ ಸಿಂಗರಿಸಿ ಪೂಜೆಯಂ ನೋಡಿ ಮೆಚ್ಚದೆ ಪೂಜೆಯಂ ಮಾಡಿ ಓಜೆಗೆಟ್ಟೆರುಹಗೆಟ್ಟ ತಿಲಲ್ಲೆಯಂಮಾಡಿ, ನಯನಂಗಳೊಳು ಪೂಜೆ ಬರದಂತೆ ನೋಡುತಂ ಭಯಭಕ್ತಿಯಂ ಪೂಜೆ ಮೆರೆವಂತೆ ಮಾಡುತಂ ನಿತ್ಯನಿರ್ಮಳನೆ ನಿಃಕಳನೆ ಕೂಡಲಸಂಗ ನಿತ್ಯನಿರ್ಭಯನೆ ನಿರುಪಮನೆ ಕೂಡಲಸಂಗ ಹೊಗಳ್ವ ವೇದಾಳಿಗತಿಗೂಢ ಕೂಡಲಸಂಗ ಸೊಗಯಿಸುವ ಘನವೃಷಾಭಾರೂಢಕೂಡಲ ಸಂಗ ಎನ್ನ ಮನದೊಳಗೆ ಕುಣಿದಾಡು ಕೂಡಲ ಸಂಗ

ಎಂದು ಸ್ತುತಿಗಯ್ವುತಂ ಸ್ನೇಹರಸ ದೊಳ್‌ಕೂಡಿ ಇಂದು ಧರನೊಳ್ ಸಲುಗೆಯಂ ಭಕ್ತಿಯಿಂಬೇಡಿ ಇದಕ್ಕಿಂತ ಭಕ್ತಿ ಎಲ್ಲಿದೆ ? ಸದಾಸಂಗಮನಾಥನ ಪೂಜೆಶರಣರ ಸತ್ಸಂಗದಿಂದ ಅವರ ಮನಸ್ಸು ಪಕ್ವವಾಗುತ್ತಾ ಬಂತು. ದುರ್ವ್ಯಸನಿದುರಾಚಾರಿ ಎಂದೆನಿಸದಿರಯ್ಯಾ ಎನ್ನ ಲಿಂಗ ವ್ಯಸನಿ ಸಂಗಮಪ್ರೇಮಿ ಎಂದೆನಿಸಯ್ಯಾ.......

ಕೂಡಲ ಸಂಗಮದೇವ ಸೆರಗೊಡ್ಡಿ ಬೇಡುವೆನು ಅವರ ಭಕ್ತಿ ಎಷ್ಟುಪರಾಕಾಷ್ಟತೆಯನ್ನು ಮುಟ್ಟಿತೆಂದರೆ ಅಂಗಗಳೂ ಊನವಾದರೆ ಕೂಡಲಸಂಗನನ್ನು ಸೇಟಿಸಲು ಮತ್ತಷ್ಟುಒಳ್ಳಿತು ಎಂಬ ಭಾವನೆಯುಕ್ಕಿ ಬಂದು 'ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ! ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ! ಮತ್ತೊಂದುಕೇಳದಂತೆ ಕಿವುಡನ ಮಾಡಯ್ಯ ತಂದೆ ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಿಸದಂತೆ ಇರಿಸುಕೂಡಲ ಸಂಗಮ ದೇವಾ ಎಂದು ಆರ್ತನಾಗಿ ಬೇಡುತ್ತಿದ್ದನು. ಹೀಗಿರುವಾಗ ಕೂಡಲ ಸಂಗನು ಬಸವಣ್ಣನಿಗೆ ಮತ್ತೊಂದು ಪರೀಕ್ಷೆಗೆ ಒಡ್ಡುವನು. ಅವನು ನಿದ್ರೆಯಲ್ಲಿದ್ದಾಗ, ಕೂಡಲ ಸಂಗನು ಕನಸಿನಲ್ಲಿ ಕಾಣಿಸಿಕೊಂಡು

ಎಲೆ ಮಗನೆ ಬಸವ ಬಸವಣ್ಣ ಬಸವದೇವಿ ನಿನ್ನಂ ಮಹೀತಳದೊಳು ಮೆರೆದಪೆವು ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗುಎನ್ನಲು, ನಿದ್ರೆಯಿಂದ ಎಚ್ಚೆತ್ತ ಬಸವಣ್ಣ ದಿಕ್ಕು ತೋಚದಂತಾಗುವನು.

ದೇವ, ದೇವ ಸಂಗ ಕಂಡ್ಯೆ ಕೆಟ್ಟೆಂ ಎಂದು ಬೆಚ್ಚಿಹಲುಬುತ್ತಾನೆ. ಧನ, ಅಧಿಕಾರ ಕೀರ್ತಿಯನ್ನು ಒಲ್ಲದ ಬಸವಣ್ಣನಿಗೆ ಬಿಜ್ಜಳನ ಬಳಿಗೆ ಹೋಗಲು ಮನಸ್ಸು ಒಪ್ಪುವುದಿಲ್ಲ. ಕೂಡಲ ಸಂಗನನ್ನು ಅರೆಗಳಿಗೆ ಬಿಡಲಾರೆ. ಇಂತಹ ಸಂಧಿಗ್ಧ ಪರಿಸ್ಥಿಯಲ್ಲಿದ್ದಾಗ ಕೂಡಲ ಸಂಗನು ಕನಿಕರಿಸಿ ಬಂದಪ್ಪಿಕಣ್ಣ ನೀರಂ ತೊಡೆದು ಮಿಗೆ ಮರುಗಿ ಬೇಡೆನ್ನ ಕಂದ ನಿನ್ನೊಡನೆ ಒಪ್ಪಂ ಬಸವ ಎಂದು ಭರವಸೆಕೊಡುತ್ತಾ, ನೋಡು ನಿನ್ನಾಣೆ, ಸಿನ್ನೊಡನೆ ಒಪ್ಪಂ ಬಸವಾ ಎಂದು ಸಾಂತ್ವನಗೊಳಿಸುತ್ತಾ, ನಡೆಯಯ್ಯಾ, ನಡೆ ಮಗನೆ ನಡೆಕಂದ ಬಸವಣ್ಣ ಪೊಡವಿಗಧಿಪತಿಯಾಗಿ ಬಾಳು ಬಸವಣ್ಣ ಎಂದು ಹರಸಿ ಕಣ್ಮರೆಯಾದನು. ಬಸವಣ್ಣ ನಿರ್ವಾಹವಿಲ್ಲದೆ ಬಿಜ್ಜಳನ ಆಸ್ಥಾನಕ್ಕೆ ತೆರಳುವನು. ನಂತರ ಕ್ರಮವಾಗಿ ಅಧಿಕಾರ ಗದ್ದುಗೆ ಏರುತ್ತಾ ಮಂತ್ರಿಯಾದರು. ಆಸ್ಥಾನದ ಜವಾಬುದಾರಿಕೆ ಕೆಲಸವಿದ್ದು ಪೂಜೆ ಪುನಸ್ಕಾರಗಳು ದೂರವಾಗುತ್ತದೆ. ಕೂಡಲಸಂಗನನ್ನ ಏಕಾಗ್ರತೆಯಿಂದ ಪೂಜಿಸಲು ಸಾಧ್ಯವಾಗದಿರಲು ಕೂಡಲ ಸಂಗನ ದರ್ಶನವಾಗುವುದೋ ಇಲ್ಲವೊ ಎಂದು ಒಳ ತೋಟಿಯಲ್ಲಿ ಸಿಲುಕುತ್ತಾನೆ. ಆಗ ಮತ್ತೆ ಅಯ್ಯಾ! ಅಯ್ಯಾ! ಎಂದು ಕರೆವುತ್ತಲಿದ್ದೇನೆ, ಅಯ್ಯಾ ಅಯ್ಯಾ ಎಂದು ಬಳಲುತ್ತಿದ್ದೇನೆ, ಓ ಎನ್ನಲಾಗದೆ ಅಯ್ಯಾ ಆವಾಗಲೂ ನಿಮ್ಮ ಕರೆವುತ್ತಿದ್ದೇನೆ! ಓ ಎನ್ನದೆ, ಮೌನವೇ ಕೂಡಲ ಸಂಗಮದೇವಾ ಎಂದು ಮೊರೆಯಿಡುತ್ತಾರೆ.



ಈವರೆಗೆ ಕೂಡಲ ಸಂಗನಲ್ಲಿ ಏಕಾಂತವಾಗಿದ್ದ ಅವರಿಗೆ ಜನ ಸಂಪರ್ಕ ದೊರೆಯುತ್ತದೆ. ಡಾಂಬಿಕ ಭಕ್ತರನ್ನು ಕಂಡು ನಾದಪ್ರಿಯನಲ್ಲ, ವೇದಪ್ರಿಯನಲ್ಲ, ಭಕ್ತಿ ಪ್ರಿಯ ನಮ್ಮ ಕೂಡಲ ಸಂಗಮದೇವ ಎಂದು ಬುದ್ಧಿ ಹೇಳುವರು. ಕರ್ಮ ವ್ರತಾದಿ ಹೋಮಗಳಿಂದ ಜನರು ಸ್ವರ್ಗಕ್ಕೆ ಹೋಗುವರು. ವೇದದ ಕರ್ಮಕಾಂಡವು ಪ್ರಾಣಿಹಿಂಸೆಯನ್ನು ಪ್ರಚೋದಿಸುತ್ತದೆ. ಜ್ಞಾನಿಯು ನೇತಿ ನೇತಿ ಎನ್ನುತ್ತಾ ನೆಲೆ ಕಾಣದಾಗುವನು. ಆದ್ದರಿಂದ ಬಸವಣ್ಣ ಕರ್ಮ ಮತ್ತು ಜ್ಞಾನದಗೊಡವೆಗೆ ಹೋಗದೆ ತ್ರಿವಿಧ ದಾಸೋಹದಲ್ಲಿ ತೊಡಗುವರು. ತ್ರಿವಿಧ ದಾಸೋಹವೆಂದರೆ ಗುರು ಲಿಂಗ ಜಂಗಮರ ದಾಸೋಹ. ಭಕ್ತರ ಉದ್ಧಾರಕ್ಕಾಗಿ ಭಗವಂತನು ಈ ಮೂರುರೂಪದಲ್ಲಿ ಬರುವನು. ಭಕ್ತನು ತನ್ನ ತನು ಮನ ಧನಗಳನ್ನು ಇವರಿಗೆ ಅರ್ಪಿಸಿ ಭಿನ್ನ ಭಾವ ವಿಲ್ಲದೆ ನಡೆದುಕೊಳ್ಳುವನು. ಆ ಕಾಲದಲ್ಲಿ ಬಿಜ್ಜಳನು ಬಸವಣ್ಣನವರಿಗೆ ತಿಂಗಳಿಗೆ ಸಾವಿರ ಹೊನ್ನುಗಳನ್ನು ಸಂಬಳವಾಗಿ ಕೊಡುತ್ತಿದ್ದ. ಬಸವಣ್ಣನವರು ಒಂದು ಚಿಕ್ಕಾಸನ್ನೂ ತಮಗಾಗಿ ಬಳಸದೆ ತ್ರಿವಿಧ ದಾಸೋಹಕ್ಕಾಗಿಯೂ, ಪ್ರಜೆಗಳ ಯೋಗ ಕ್ಷೇಮಕ್ಕಾಗಿಯೂ ವಿನಿಯೋಗಿಸುತ್ತಿದ್ದರು. ಭಕ್ತಿ ಮಾರ್ಗವು ಸುಲಭವಾಗಿ ಕಂಡರೂ, ಈ ಪಥದಲ್ಲಿ ಭಗವಂತನು ಭಕ್ತನನ್ನು ವಿವಿಧ ಪರೀಕ್ಷೆಗಳಿಗೆ ಒಡ್ಡುವನು ಅಂತಃನಿರೀಕ್ಷಣೆ, ಭಾವ ಶುದ್ಧಿ, ಭಗವಂತನನಿಷ್ಠೆಯು ಅಗತ್ಯವಾಗುತ್ತದೆ.

ಹರ ತನ್ನ ಭಕ್ತರ ತಿರಿವಂತೆ ಮಾಡುವ, ಒರೆದು ನೋಡುವ ಸುವರ್ಣದ ಚಿನ್ನದಂತೆ, ಅರೆದು ನೋಡುವ ಕಬ್ಬಿನ ಕೋಲಿನಂತೆ, ಬೆದರದೆ ಬೆಚ್ಚದೆ ಇದ್ದರೆ ಕರವಿಡದರೆ ಕೊಂಬರಾಮನಾಥ. ಭಕ್ತನ ಸರ್ವಸ್ವವನ್ನು ಕಸಿದುಕೊಂಡು ನಿರ್ಗತಿಕನನ್ನಾಗಿ ಮಾಡುವನು ಎಂದು ಭಾಗವತದಲ್ಲಿ ಹೇಳಿದೆ. ಭಕ್ತನು ಅಹಂಕಾರ ಮಮಕಾರಗಳನ್ನು ಕೈಬೀಸುವಂತೆ ಮಾಡುವನು. ಅದಕ್ಕಾಗಿಯೇ ಬಸವಣ್ಣನವರು ತಂದೆ-ತಾಯಿಯರನ್ನು, ಬ್ರಾಹ್ಮಣತ್ವವನ್ನೂ ಸಕಲ ಬಂಧು ಬಳಗವನ್ನು ತೊರೆಯುತ್ತಾರೆ ಏಕಾಂಗಿಯಾಗಿ ಕೂಡಲಸಂಗಮಕ್ಕೆ ತೆರಳುವರು. ಅಲ್ಲಿಂದ ಬಿಜ್ಜಳನ ಆಸ್ಥಾನಕ್ಕೆ, ಕೂಡಲ ಸಂಗನ ಆದೇಶದಂತೆ ಹೋಗುವರು. ಅಲ್ಲಿ ಅವರಿಗೆ ಜನಸಂಪರ್ಕ ದೊರೆಯುತ್ತದೆ. ಲೌಕಿಕ ಪ್ರಪಂಚದ ಅರಿವು ಆಗುತ್ತದೆ. ಅವರ ಕಣ್ಣಿಗೆ ಸಮಾಜದ ಅನಿಷ್ಟಪದ್ಧತಿಗಳು, ಮೂಢ ನಂಬಿಕೆಗಳು ಗೋಚರವಾಗಿ ನೊಂದುಕೊಳ್ಳುವರು. ಅವರು ಸಂತುಷ್ಟರಾಗಿ ಕಲ್ಲನಾಗರ ಕಂಡರೆ ಹಾಲನೆರೆ ಎಂಬರು ದಿಟದ ನಾಗದಕಂಡರೆ ಕೊಲ್ಲೆಂಬರಯ್ಯ, ಉಂಬ ಜಂಗಮ ಬಂದರೆ ನಡೆ ಎಂಬರು, ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ ಎಂದು ಜನಗಳ ಮೌಢ್ಯವನ್ನು ಛೇಡಿಸುತ್ತಾರೆ. ಬಸವಣ್ಣನವರಿಗೆ ಬ್ರಾಹ್ಮಣರಿಂದ ಹಿಡಿದು ಮಾದಿಗನವರೆಗೆ ಎಲ್ಲರೂ ಒಂದೇ ಅದರಲ್ಲಿ ಮೇಲೆ ಕೀಳೆಂಬುದು ಸರಿಯಲ್ಲವೆಂದೂ ವಾದಿಸುವರು. ಕೊಲ್ಲುವವನೇ ಮಾದಿಗ, ಹೊಲಸುತಿಂಬುವವನೇ ಹೊಲೆಯ ಕುಲವೇನೊ, ಅವಂದಿರ ಕುಲವೇನೋ? ಎಂದು ಪ್ರಶ್ನಿಸುವರು. ಸಕಲ

ಇವರಲ್ಲಿ ಕೆಲವೊಮ್ಮೆ ನಿಷ್ಠುರತೆ ಕಂಡರೂ, ಸಮಾಜ ಸುಧಾರಣೆಗೆ ಅವರಲ್ಲಿದ್ದ ಕಳಕಳಿ ಕಂಡುಬರುತ್ತದೆ. ಅವರು ಅಂದು ತಂದ ಸಾಮಾಜಿಕ ಸುಧಾರಣೆಯು ಇಂದಿಗೂ ಪ್ರಸ್ತುತವಾಗಿದೆ ಎಂದು ತಿಳಿಯಬೇಕು. ಒಟ್ಟಿನಲ್ಲಿ ಬಸವೇಶ್ವರರ ವಚನಗಳು ಪ್ರಸನ್ನ ಲಲಿತವಾಗಿವೆ. ಬಿಜ್ಜಳನು ಭವಿ, ಬಸವಣ್ಣ ಭಕ್ತ. ಹೀಗಿದ್ದ ಭವಿಯಲ್ಲಿ ಊಳಿಗ ಮಾಡಬಹುದೆ? ಎಂದು ಅನೇಕರು ಪ್ರಶ್ನಿಸುವರು. ಅದಕ್ಕೆ ಬಸವಣ್ಣನವರು ನಾನು ಆರಂಭಮಾಡುವೆನಯ್ಯಾ, ಗುರು ಪೂಜೆಗೆಂದು ಬೆವಹಾರ ಮಾಡುವೆನೆಯ್ಯಾ, ಜಂಗಮ ದಾಸೋಹಕ್ಕೆಂದು ನಾನ್ಯಾವ ಕರ್ಮಂಗಳ ಮಾಡಿದೆಯೊ ——·—— ನೀಕೊಟ್ಟ ದ್ರವ್ಯ ನಿಮಗಲ್ಲದೆ ಮತ್ತೊಂದು ಕ್ರಿಯೆ ಮಾಡೆನು, ಎನ್ನ ಒಡಲಿಂಗೆ, ಎನ್ನ ಒಡವೆಗೆ, ಎನ್ನ ಮಡದಿ ಮಕ್ಕಳಿಗೆಂದು ಕುದಿದನಾದರೆ, ಎನ್ನ ಮನಕ್ಕೆ ಮನವೇಸಾಕ್ಷಿ. ಬಿಜ್ಜಳನ ಗದ್ದುಗೆಯು ಓಲೈಸಿಹವೆಂದು ನುಡಿದವಯ್ಯಾ ಪ್ರಮಥರು ಎಂದು ನೊಂದುಕೊಳ್ಳುವರು. ಭಾವನಾ ಜೀವಿಗಳಿಗೆ ಭಕ್ತಿಮಾರ್ಗವೇ ಲೇಸಾಗಿಕಾಣುವುದು. ಭಕ್ತನ ಸಮಭಾವವನ್ನು ನೋಡಿ ಜನರು ನಿಂದಿಸುತ್ತಾರೆ. ಕೆಲವೊಮ್ಮೆ ಅವರನ್ನು ಹೊಗಳಿ ಹೊಗಳಿ ದಾರಿ ತಪ್ಪಿಸುವರು. ಈವರೆಗೆ ಬಸವಣ್ಣನವರಂತೆ ಯಾರೂ ದಾಸೋಹಮಾಡಿಲ್ಲ. ಅವರಿಗಿಂತ ಮಿಗಿಲಾಗಿ ಯಾರೂ ಭಕ್ತರು ಇಲ್ಲವೆಂದು ಜಂಗಮರು ಹೊಗಳುತ್ತಾರೆ. ಇದಕ್ಕೆ ಬಸ-ವಣ್ಣನವರು ನೊಂದುಕೊಂಡು, ಎನ್ನಲ್ಲಿ ಭಕ್ತಿ ಸಾಸಿವೆಯು, ಷಡ್ಭಾಗದಿನಿತಿಲ್ಲ, ಎನ್ನ ಭಕ್ತನೆಂಬರು, ಎನ್ನ ಸಮಯಾಚಾರಿ ಎಂಬರು ನಾನೇನ ಪಾಪವ ಮಾಡಿದೆನೊ, ಎನ್ನ ವರೊಲಿದು ಹೊನ್ನಶೂಲದಲಿಕ್ಕಿದರೆನಯ್ಯ ಹೊಗಳಿ ಹೊಗಳಿ ಎನ್ನ ಹೊಗಳಿಕೆ ಮೈಗೂ ಡಿತ್ತಲ್ಲಾ ನೊಂದೆನು ಸೈರಿಸಲಾರೆನಯ್ಯಾ ಕೂಡಲಸಂಗಮದೇವಾ, ನಿನಗೊಳ್ಳಿದನಾದರೆ ಎನ್ನ ಹೊಗಳಿಕೆಗೆ ಅಡ್ಡ ಬಾರಾ ಎಂದು ಭಗವಂತನನ್ನು ಅಂಗಲಾಚುವರು. ತಮ್ಮನ್ನು ಸರ್ವತ್ರವಾಗಿ ಭಗವಂತನಿಗೆ ಅರ್ಪಿಸಿ ಎನ್ನಕಾಯಕವದಂಡಿಗೆ ಮಾಡಯ್ಯಾ, ಎನ್ನಶಿರವ ಸೋರೆಯ ಮಾಡಯ್ಯಾ, ಎನ್ನ ಬೆರಳ ಕಡ್ಡಿಯ ಮಾಡಯ್ಯಾ. ಬತಿ ಸರಾಗವ ಹಾಡಯ್ಯಾ, ಉದರಲೊತ್ತಿಸಿ ಬಾರಿಸು ಕೂಡಲಸಂಗಮದೇವಾ ಎಂದು ಬೇಡುವರು. ಈ ವಚನಗಳು ಚಿಕ್ಕದಾಗಿದ್ದರೂ, ಭಾವಭರಿತವಾಗಿಯೂ ರಸಾವೇಶದಿಂದ ಕೂಡಿ ರುತ್ತದೆ. ಇಷ್ಟಾದರೂ ನಾನು ಮಾಡುತ್ತೇನೆ, ಕೊಡುತ್ತೇನೆ ಎಂಬ ಭಾವ ಸ್ವಲ್ಪ ಇರಬಹುದು. ಅದನ್ನು ಅಂತರಂಗ ಶೋಧದಿಂದ ಕಂಡು ಕೊಂಡ ಬಸವಣ್ಣನವರು. ತನುವ ಬೇಡಿದೊಡೀವೆ, ಬೇಡು ಬೇಡಲೇ ಇಂದೇ ಕಣ್ಣ ಬೇಡಿದಡೀವೆ. ತಲೆಯ ಬೇಡಿದ ಡೀವೆ ಕೂಡಲಸಂಗಮದೇವಾ ಎನ್ನುವರು. ಇದನ್ನರಿತ ಮಹಾಜ್ಞಾನಿ ಅಲ್ಲಮಪ್ರಭು, ಬಸವಣ್ಣನವರು ಕಲ್ಯಾಣಕ್ಕೆ ಬಂದಾಗ ಹೀಗೆಚುಚ್ಚುವರು. ತನುಮನಧನಗಳೆಲ್ಲಾ ಗುರು ಲಿಂಗ ಜಂಗಮರಸ್ವತ್ತಾಗಿವೆ. ನೀನು ಕೊಡುವುದು ಏನು? ಯಾರಿಗೆ ನೀನು ದಾಸೋಹ



ಎಂಬುದು ಪೂರ್ಣವಾಗಿ ಕರಗಿಹೋಗಿ ಪುಟಕ್ಕಿಟ್ಟ ಚಿನ್ನವಾಗುವರು. ಕಲ್ಯಾಣದಲ್ಲಿ ಅನುಭವ ಮಂಟಪ ಏರ್ಪಟ್ಟು, ಅದಕ್ಕೆ ಅಲ್ಲಮಪ್ರಭುವು ಅಧ್ಯಕ್ಷರಾಗುತ್ತಾರೆ. ಬಸವಣ್ಣನವರು, ಜ್ಞಾನಯೋಗಿ ಚೆನ್ನಬಸವಣ್ಣ ಕರ್ಮಯೋಗಿಸಿದ್ದರಾಮ; ಶಿವಶರಣೆಯರಾದ ಅಕ್ಕಮಹಾದೇವಿಯರು ಸೇರುತ್ತಾರೆ. ಅನುಭವಮಂಟಪ ಭಕ್ತಿ, ಜ್ಞಾನ, ಕರ್ಮ, ವೈರಾಗ್ಯದ ಸಂಗಮವಾಗಿ, ಅದ್ಭುತವಾದ ಕ್ರಾಂತಿಯಾಗುತ್ತದೆ. ಮಾಡುವಾತ ನಾನಲ್ಲಯ್ಯಾ ನೀಡುವಾತ ನಾನಲ್ಲಯ್ಯಾ ಬೇಡುವಾತ ನಾನಲ್ಲಯ್ಯಾ ತಂದೆ ನೀನು ತಾಯಿ ನೀನು ಬಳಗ ನೀನು. ನೀವಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವ ಹಾಲಲ್ಲದ್ದು, ನೀರಲ್ಲದ್ದು ಎಂದು ಕನಲುತ್ತಾ ಭಕ್ತಿಯೋಗದ ಅಂತಿಮವಾದ ಶರಣಾಗತಿಯನ್ನು ಮುಟ್ಟುವರು. ಆಗ ಅವರಿಗೆ ಕೂಡಲಸಂಗನ ಸಾಕ್ಷಾತ್ಕಾರವಾಗುತ್ತದೆ. ಅವರು ಕೂಡಲಸಂಗಮದೇವನನ್ನು ವರ್ಣಿಸುವುದನ್ನು ನೋಡಿ.

ಹೊನ್ನಹಾವಿಗೆಯ ಮೆಟ್ಟಿದವನ, ಮಿಡಿಯ ಮುಟ್ಟಿದ ಕೆಂಜಡೆಯವನ, ಮೈಯಲ್ಲಿ ವಿಭೂತಿ ಧರಿಸಿದವನ ಕರದಲ್ಲಿ ಕಪಾಲಹಿಡಿದವನ, ಅರ್ಧನಾರೀಶ್ವರನಾದವನ ಬಾಣನ ಮನೆಯಲ್ಲಿ ಕಾಯುವನ ನಂಬಿಗೆ ಕುಂಟಣಿ ಯೊದವನ, ಚೋಳಂಗೆ ಹೊನ್ನ ಮಳೆಯಕರೆದವನ ಎನ್ನ ಮನಕ್ಕೆ ಬಂದವನ, ಸದ್ಭಕ್ತರ ಹೃದಯದಲಿಪ್ಪವನ, ಮಾಡುವ ಪೂಜೆಯಲೊಪ್ಪುವನ, ಕೂಡಲಸಂಗಯ್ಯನೆಂಬುವನ, ಕಂಡು ಕನಸ ನಿದಾನವ ಕಂಡೆನಯ್ಯಾ ಬಿಡಬಾರದ ನಿದಾನವ ಕಂಡೆನಯ್ಯಾ, ಕೂಡಲಸಂಗಯ್ಯನೆಂಬ ನಿದಾನವಕಂಡು ಬಿಡಲಾರೆನಯ್ಯಾ.

ಭಕ್ತರ ಸಂಗದಲ್ಲಿ ಆನಂದದಿಂದ ಕೂಡಲಸಂಗನನ್ನು ಕುರಿತು ಹಾಡುತ್ತಾ, ಜೀವನ್ಮುಕ್ತನಾಗಿ, ಅಪರೋಕ್ಷ ಜ್ಞಾನಿಯಾಗಿ ಪಾರಮಾರ್ಥದ ತುತ್ತ ತುದಿಯನ್ನು ಮುಟ್ಟುವನು. ಆ ಸಮಯದಲ್ಲಿ ಬಸವಣ್ಣನವರಿಗೆ ಬ್ರಹ್ಮ ಪದವಿ ವಿಷ್ಣು ಪದವಿ ಕೊನೆಗೆ ಕೈಲಾಸದ ರುದ್ರಪದವಿಯೂ ಬೇಡವಾಗುತ್ತದೆ. ಬಸವಣ್ಣ ಶರಣರಲ್ಲಿ ಶಿವನನ್ನು ಕಾಣುತ್ತಾ ಸದಾ ಅವರ ಸೇವೆಯಲ್ಲಿ ತೊಡಗಿರುತ್ತಾನೆ. ದೇವಲೋಕ ಬೇರೆ ಇಲ್ಲ, ಮರ್ತ್ಯ ಲೋಕದಲ್ಲಿಯೇ ಅದನ್ನು ಕಾಣಿರಿ ಎಂದು ಹೇಳುವರು. ಮರ್ತ್ಯಲೋಕ ಕರ್ತಾರನ ಕಮ್ಮಟವೆಂದು ತಿಳಿಯುವರು.

ಅನುಭವ ಮಂಟಪದಿಂದ ಶಿವಶರಣರು ಚದುರಿ ಹೋದನಂತರ, ತನ್ನ ನೆಲೆಯಾದ ಕೂಡಲಸಂಗಮಕ್ಕೆ ತೆರಳುವರು. ಕೂಡಲಸಂಗಮನಲ್ಲಿ ಐಕ್ಯವಾಗುವಾಗ, ತನ್ನ ಪತ್ನಿ ನೀಲಾಂಬಿಕೆಯ ಜ್ಞಾಪಕ ಬರುತ್ತದೆ. ತನ್ನೊಡನೆ ಕೂಡಲ ಸಂಗಮನೊಡನೆ ಐಕ್ಯವಾಗಲು ತಿಳಿಸಲು, ಆಕೆ ಕೂಡಲಸಂಗ ತನ್ನಲ್ಲಿಯೇ ಇರುವ ಇಷ್ಟಲಿಂಗದಲ್ಲಿ ಐಕ್ಯವಾಗುವಳು. ಬಸವಣ್ಣನವರ ಪಾರಮಾರ್ಥ ಮಾರ್ಗದಲ್ಲಿ ಭಕ್ತಿಮಾರ್ಗವು ಪ್ರಧಾನವಾಗಿ ಕಂಡರೂ ದ್ವೈತ, ವಿಶಿಷ್ಟಾದ್ವೈತ ಅದ್ವೈತಗಳು ಮುಪ್ಪುರಿಗೊಳ್ಳುತ್ತದೆ.

ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು. ಎಂದು ಜಾತಿ ಭೇದವನ್ನು ವಿಶ್ಲೇಷಿಸುವರು ಕೆಲವೊಮ್ಮೆ ಜಾತಿ ವೈಷಮ್ಯ ಗಂಡು ಹೆಣ್ಣಿನ ಅಸಮಾನತೆ ಅಸ್ಪೃಶ್ಯತೆಗಳನ್ನು ನೋಡಿ ಸಿಡಿಮಿಡಿಗೊಂಡು ಖಂಡಿಸುವರು. ಇದರಲ್ಲಿ ಕೆಲವೊಮ್ಮೆ ನಿಷ್ಟುರತೆ ಕಂಡರೂ, ಸಮಾಜ ಸುಧಾರಣೆಗೆ ಅವರಲ್ಲಿದ್ದ ಕಳಕಳಿ ಕಂಡುಬರುತ್ತದೆ. ಅವರು ಅಂದು ತಂದ ಸಾಮಾಜಿಕ ಸುಧಾರಣೆಯು ಇಂದಿಗೂ ಪ್ರಸ್ತುತವಾಗಿದೆ ಎಂದು ತಿಳಿಯಬೇಕು. ಒಟ್ಟಿನಲ್ಲಿ ಬಸವೇಶ್ವರರ ವಚನಗಳು ಪ್ರಸನ್ನ ಲಲಿತವಾಗಿವೆ. ಬಿಜ್ಜಳನು ಭವಿ, ಬಸವಣ್ಣ ಭಕ್ತ. ಹೀಗಿದ್ದ ಭವಿಯಲ್ಲಿ ಊಳಿಗ ಮಾಡಬಹುದೆ? ಎಂದು ಅನೇಕರು ಪ್ರಶ್ನಿಸುವರು. ಅದಕ್ಕೆ ಬಸವಣ್ಣನವರು ನಾನು ಆರಂಭಮಾಡುವೆನಯ್ಯಾ, ಗುರು-ಪೂಜೆಗೆಂದು ಬೆವಹಾರ ಮಾಡುವೆನೆಯ್ಯಾ, ಜಂಗಮ ದಾಸೋಹಕ್ಕೆಂದು ನಾನ್ಯಾವ ಕರ್ಮಂಗಳ ಮಾಡಿದೆಯೊ ——-——ನೀಕೊಟ್ಟ ದ್ರವ್ಯ ನಿಮಗಲ್ಲದೆ ಮತ್ತೊಂದು ಕ್ರಿಯೆ ಮಾಡೆನು, ಎನ್ನ ಒಡಲಿಂಗೆ, ಎನ್ನ ಒಡವೆಗೆ, ಎನ್ನ ಮಡದಿ ಮಕ್ಕಳಿಗೆಂದು ಕುದಿದನಾದರೆ, ಎನ್ನ ಮನಕ್ಕೆ ಮನವೇಸಾಕ್ಷಿ. ಬಿಜ್ಜಳನ ಗದ್ದುಗೆಯ ಓಲೈಸಿಹವೆಂದು ನುಡಿದವಯ್ಯಾ ಪ್ರಮಥರು ಎಂದು ನೊಂದುಕೊಳ್ಳುವರು. ಭಾವನಾ ಜೀವಿಗಳಿಗೆ ಭಕ್ತಿಮಾರ್ಗವೇ ಲೇಸಾಗಿಕಾಣುವುದು. ಭಕ್ತನ ಸಮಭಾವವನ್ನು ನೋಡಿ ಜನರು ನಿಂದಿಸುತ್ತಾರೆ. ಕೆಲವೊಮ್ಮೆ ಅವರನ್ನು ಹೊಗಳಿ ಹೊಗಳಿ ದಾರಿ ತಪ್ಪಿಸುವರು. ಈವರೆಗೆ ಬಸವಣ್ಣನವರಂತೆ ಯಾರೂ ದಾಸೋಹಮಾಡಿಲ್ಲ. ಅವರಿಗಿಂತ ಮಿಗಿಲಾಗಿ ಯಾರೂ ಭಕ್ತರು ಇಲ್ಲವೆಂದು ಜಂಗಮರು ಹೊಗಳುತ್ತಾರೆ. ಇದಕ್ಕೆ ಬಸ-ವಣ್ಣನವರು ನೊಂದುಕೊಂಡು, ಎನ್ನಲ್ಲಿ ಭಕ್ತಿ ಸಾಸಿವೆಯ, ಷಡ್ಭಾಗದಿನಿತಿಲ್ಲ, ಎನ್ನ ಭಕ್ತನೆಂಬರು, ಎನ್ನ ಸಮಯಾಚಾರಿ ಎಂಬರು ನಾನೇನ ಪಾಪವ ಮಾಡಿದೆನೊ, ಎನ್ನ ವರೊಲಿದು ಹೊನ್ನಶೂಲದಲಿಕ್ಕಿದರೆನಯ್ಯ ಹೊಗಳಿ ಹೊಗಳಿ ಎನ್ನ ಹೊಗಳಿಕೆ ಮೈಗೂಡಿತ್ತಲ್ಲಾ ನೊಂದೆನು ಸೈರಿಸಲಾರೆನಯ್ಯಾ ಕೂಡಲಸಂಗಮದೇವಾ, ನಿನಗೊಳ್ಳಿದನಾದರೆ ಎನ್ನ ಹೊಗಳಿಕೆಗೆ ಅಡ್ಡ ಬಾರಾ ಎಂದು ಭಗವಂತನನ್ನು ಅಂಗಲಾಚುವರು. ತಮ್ಮನ್ನು ಸರ್ವತ್ರವಾಗಿ ಭಗವಂತನಿಗೆ ಅರ್ಪಿಸಿ ಎನ್ನಕಾಯಕವದಂಡಿಗೆ ಮಾಡಯ್ಯಾ, ಎನ್ನಶಿರವ ಸೋರೆಯ ಮಾಡಯ್ಯಾ, ಎನ್ನ ಬೆರಳ ಕಡ್ಡಿಯ ಮಾಡಯ್ಯಾ. ಬತ್ತಿಸರಾಗವ ಹಾಡಯ್ಯಾ, ಉದರಲೊತ್ತಿಸಿ ಬಾರಿಸು ಕೂಡಲಸಂಗಮದೇವಾ ಎಂದು ಬೇಡುವರು. ಈ ವಚನಗಳು ಚಿಕ್ಕದಾಗಿದ್ದರೂ, ಭಾವಭರಿತವಾಗಿಯೂ ರಸಾವೇಶದಿಂದ ಕೂಡಿರುತ್ತದೆ. ಇಷ್ಟಾದರೂ ನಾನು ಮಾಡುತ್ತೇನೆ, ಕೊಡುತ್ತೇನೆ ಎಂಬ ಭಾವ ಸ್ವಲ್ಪ ಇರಬಹುದು. ಅದನ್ನು ಅಂತರಂಗ ಶೋಧದಿಂದ ಕಂಡು ಕೊಂಡ ಬಸವಣ್ಣನವರು. ತನುವ ಬೇಡಿದೊಡೀವೆ, ಬೇಡು ಬೇಡಲೇ ಇಂದೇ ಕಣ್ಣ ಬೇಡಿದಡೀವೆ. ತಲೆಯ ಬೇಡಿದಡೀವೆ ಕೂಡಲಸಂಗಮದೇವಾ ಎನ್ನುವರು. ಇದನ್ನರಿತ ಮಹಾಜ್ಞಾನಿ ಅಲ್ಲಮಪ್ರಭು, ಬಸವಣ್ಣನವರು ಕಲ್ಯಾಣಕ್ಕೆ ಬಂದಾಗ ಹೀಗೆಚುಚ್ಚುವರು. ತನುಮನಧನಗಳೆಲ್ಲಾ ಗುರು ಲಿಂಗ ಜಂಗಮರಸ್ವತ್ತಾಗಿವೆ. ನೀನು ಕೊಡುವುದು ಏನು? ಯಾರಿಗೆ ನೀನು ದಾಸೋಹ



ಮಾಡಬೇಕೆಂದಿರುವೆ ಇದೇನು ಪೂಜೆ ಈ ಆರಾಧನೆಗಳ ಗೊಂದಲ. ದೇವರು ಬೇಡುವುದಕ್ಕೆ ತಿರುಕನೆ ಎಂದು ಸವಾಲು ಹಾಕುವರು. ಬಸವಣ್ಣನವರಲ್ಲಿದ್ದ "ನಾನು" ಎಂಬದು ಪೂರ್ಣವಾಗಿ ಕರಗಿಹೋಗಿ ಪುಟಕ್ಕಿಟ್ಟ ಚಿನ್ನವಾಗುವರು. ಕಲ್ಯಾಣದಲ್ಲಿ ಅನುಭವ ಮಂಟಪ ಏರ್ಪಟ್ಟು, ಅದಕ್ಕೆ ಅಲ್ಲಮಪ್ರಭುವು ಅಧ್ಯಕ್ಷರಾಗುತ್ತಾರೆ. ಬಸವಣ್ಣನವರು, ಜ್ಞಾನಯೋಗಿ ಚೆನ್ನಬಸವಣ್ಣ ಕರ್ಮಯೋಗಿಸಿದ್ದರಾಮ; ಶಿವಶರಣೆಯರಾದ ಅಕ್ಕಮಹಾದೇವಿಯರು ಸೇರುತ್ತಾರೆ. ಅನುಭವಮಂಟಪ ಭಕ್ತಿ, ಜ್ಞಾನ, ಕರ್ಮ, ವೈರಾಗ್ಯದ ಸಂಗಮವಾಗಿ, ಅದ್ಭುತವಾದ ಕ್ರಾಂತಿಯಾಗುತ್ತದೆ. ಮಾಡುವಾತ ನಾನಲ್ಲಯ್ಯಾ ನೀಡುವಾತ ನಾನಲ್ಲಯ್ಯಾ ಬೇಡುವಾತ ನಾನಲ್ಲಯ್ಯಾ ತಂದೆ ನೀನು ತಾಯಿ ನೀನು ಬಳಗ ನೀನು. ನೀವಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವ ಹಾಲಲ್ಲದ್ದು, ನೀರಲ್ಲದ್ದು ಎಂದು ಕನಲುತ್ತಾ ಭಕ್ತಿಯೋಗದ ಅಂತಿಮವಾದ ಶರಣಾಗತಿಯನ್ನು ಮುಟ್ಟುವರು. ಆಗ ಅವರಿಗೆ ಕೂಡಲಸಂಗನ ಸಾಕ್ಷಾತ್ಕಾರವಾಗುತ್ತದೆ. ಅವರು ಕೂಡಲಸಂಗಮದೇವನನ್ನು ವರ್ಣಿಸುವುದನ್ನು ನೋಡಿ.

ಹೊನ್ನಹಾವಿಗೆಯ ಮೆಟ್ಟಿದವನ, ಮಿಡಿಯ ಮುಟ್ಟಿದ ಕೆಂಜಡೆಯವನ, ಮೈಯಲ್ಲಿ ವಿಭೂತಿ ಧರಿಸಿದವನ ಕರದಲ್ಲಿ ಕಪಾಲಹಿಡಿದವನ, ಅರ್ಧನಾರೀಶ್ವರನಾದವನ ಬಾಣನ ಮನೆಯಲ್ಲಿ ಕಾಯುವನ ನಂಬಿಗೆ ಕುಂಟಣಿ ಯೊದವನ, ಚೋಳಂಗೆ ಹೊನ್ನ ಮಳೆಯಕರೆದವನ ಎನ್ನ ಮನಕ್ಕೆ ಬಂದವನ, ಸದ್ಭಕ್ತರ ಹೃದಯದಲಿಪ್ಪವನ, ಮಾಡುವ ಪೂಜೆಯಲೊಪ್ಪುವನ, ಕೂಡಲಸಂಗಯ್ಯನೆಂಬುವನ, ಕಂಡು ಕನಸ ನಿದಾನವ ಕಂಡೆನಯ್ಯಾ ಬಿಡಬಾರದ ನಿದಾನವ ಕಂಡೆನಯ್ಯಾ, ಕೂಡಲಸಂಗಯ್ಯನೆಂಬ ನಿದಾನವಕಂಡು ಬಿಡಲಾರೆನಯ್ಯಾ.

ಭಕ್ತರ ಸಂಗದಲ್ಲಿ ಆನಂದದಿಂದ ಕೂಡಲಸಂಗನನ್ನು ಕುರಿತು ಹಾಡುತ್ತಾ, ಜೀವನ್ಮುಕ್ತನಾಗಿ, ಅಪರೋಕ್ಷ ಜ್ಞಾನಿಯಾಗಿ ಪಾರಮಾರ್ಥದ ತುತ್ತ ತುದಿಯನ್ನು ಮುಟ್ಟುವನು. ಆ ಸಮಯದಲ್ಲಿ ಬಸವಣ್ಣನವರಿಗೆ ಬ್ರಹ್ಮ ಪದವಿ ವಿಷ್ಣು ಪದವಿ ಕೊನೆಗೆ ಕೈಲಾಸದ ರುದ್ರಪದವಿಯೂ ಬೇಡವಾಗುತ್ತದೆ. ಬಸವಣ್ಣ ಶರಣರಲ್ಲಿ ಶಿವನನ್ನು ಕಾಣುತ್ತಾ ಸದಾ ಅವರ ಸೇವೆಯಲ್ಲಿ ತೊಡಗಿರುತ್ತಾನೆ. ದೇವಲೋಕ ಬೇರೆ ಇಲ್ಲ, ಮರ್ತ್ಯ ಲೋಕದಲ್ಲಿಯೇ ಅದನ್ನು ಕಾಣಿರಿ ಎಂದು ಹೇಳುವರು. ಮರ್ತ್ಯಲೋಕ ಕರ್ತಾರನ ಕಮ್ಮಟವೆಂದು ತಿಳಿಯುವರು.

ಅನುಭವ ಮಂಟಪದಿಂದ ಶಿವಶರಣರು ಚದುರಿ ಹೋದನಂತರ, ತನ್ನ ನೆಲೆಯಾದ ಕೂಡಲಸಂಗಮಕ್ಕೆ ತೆರಳುವರು. ಕೂಡಲಸಂಗಮನಲ್ಲಿ ಐಕ್ಯವಾಗುವಾಗ, ತನ್ನ ಪತ್ನಿ ನೀಲಾಂಬಿಕೆಯ ಜ್ಞಾಪಕ ಬರುತ್ತದೆ. ತನ್ನೊಡನೆ ಕೂಡಲ ಸಂಗಮನೊಡನೆ ಐಕ್ಯವಾಗಲು ತಿಳಿಸಲು, ಆಕೆ ಕೂಡಲಸಂಗ ತನ್ನಲ್ಲಿಯೇ ಇರುವ ಇಷ್ಟಲಿಂಗದಲ್ಲಿ ಐಕ್ಯವಾಗುವಳು. ಬಸವಣ್ಣನವರ ಪಾರಮಾರ್ಥ ಮಾರ್ಗದಲ್ಲಿ ಭಕ್ತಿಮಾರ್ಗವು ಪ್ರಧಾನವಾಗಿ ಕಂಡರೂ ದ್ವೈತ, ವಿಶಿಷ್ಟಾದ್ವೈತ ಅದ್ವೈತಗಳು ಮುಪ್ಪುರಿಗೊಳ್ಳುತ್ತದೆ.

# ವ್ಯಕ್ತಿನಿರ್ಮಾಣಕ್ಕೆ ಪ್ರತಿಬಂಧಕವಾಗಿರುವ ಶಿಕ್ಷಣ.

❀ ಅರೆಯೂರು ನರಸಿಂಹಮೂರ್ತಿ, ಸಿದ್ಧಗಂಗಾ ಶಿಕ್ಷಕ ತರಬೇತಿ ಸಂಸ್ಥೆ, ಬಿ. ಹೆಚ್. ರಸ್ತೆ, ತುಮಕೂರು.

ಭಾಗ–4

ಹಿಂದಿನ ಸಂಚಿಕೆಯಲ್ಲಿ ವ್ಯಕ್ತಿತ್ವ ನಿರ್ಮಾಣಕ್ಕೆ ಸಹಕಾರಿಯಾಗುವ ಅನೇಕ ಶಕ್ತಿಗಳ ಬಗ್ಗೆ ತಿಳಿಸಲಾಗಿದ್ದು ಅದರಲ್ಲಿ ಮೊದಲನೆಯದಾದ ಶಾರೀರಿಕ ಶಕ್ತಿಯ ಬಗ್ಗೆ ವಿವರಿಸಲಾಗಿತ್ತು. ಶಿಕ್ಷಣ ಕ್ಷೇತ್ರದಲ್ಲಿ ಅತ್ಯವಶ್ಯಕವಾಗಿ ಬೇಕಾಗಿರುವ ಕೆಲವು ಅಂಶಗಳಾದ ಯೋಗ, ಪ್ರಾಣಾಯಾಮ, ಇದಕ್ಕೆ ಬೇಕಾಗಿರುವ ಶ್ರದ್ಧೆಯ ಬಗ್ಗೆ ತಿಳಿಸಲಾಗಿತ್ತು. ಇದರ ಜೊತೆಗೆ ಪ್ರಾರ್ಥನೆಯ ಮಹತ್ವವನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿತ್ತು. ಈಗ ಎರಡನೆ ಮೆಟ್ಟಲಾದ ಬೌದ್ಧಿಕ ಶಕ್ತಿಯ ಬಗ್ಗೆ ನಮ್ಮ ಗಮನ ಹರಿಸೋಣ.

**ಬೌದ್ಧಿಕಶಕ್ತಿ :-** (Intelligency)

ವ್ಯಕ್ತಿಜೀವನದಲ್ಲಿ "ಬುದ್ಧ" ಎಂಬುದು ಒಂದು ಅಗೋಚರ ಮೆದುಳಿನ ಶಕ್ತಿ. ಒಂದು ಕಾರ್ಯ ನಿರ್ವಹಣೆಯಲ್ಲಿ ವ್ಯಕ್ತಿಯ ಸಮರ್ಪಕವಾದ ಪಾಲುಗಾರಿಕೆ ಹಾಗೂ ಚತುರತೆಯನ್ನು ಬುದ್ಧಿಶಕ್ತಿ ಎಂದು ಕರೆಯಲಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಬುದ್ಧಿಶಕ್ತಿಯ ಅಳತೆಯನ್ನು ಬುದ್ಧಿ ಸೂಚ್ಯಂಕದ (Intelligence Quotient, I. Q) ರೀತಿ ಅಳೆಯುತ್ತಾರೆ. ವಿವಿಧ ಹಂತಗಳ ಮಾನದಂಡವನ್ನು ಸಿದ್ಧಪಡಿಸಿದ್ದು ಆದರ್ಶ ಸ್ಕೇಲಿನೊಡನೆ ಹೋಲಿಸಲಾಗುತ್ತಿದೆ.

**ಬುದ್ಧಿಶಕ್ತಿಯ ವಿಕಾಸದ ಪರಿಣಾಮಗಳು:-**

ವ್ಯಕ್ತಿ ಸಾಗಿಸುವ ಜೀವನ ಅವನ ಬುದ್ಧಿಮಟ್ಟವನ್ನು ಅವಲಂಬಿಸಿದೆ. ಇಂದು ಸುಖವಾಗಿ ಜೀವನಸಾಗಿಸುವ ವ್ಯಕ್ತಿಯನ್ನು ಬುದ್ಧಿವಂತ ಎಂದು ಕರೆಯಲಾಗುತ್ತಿದೆ. ಬುದ್ಧಿಶಕ್ತಿಯೆಂದರೆ ಕೇವಲ ಪುಸ್ತಕಗಳನ್ನು ಬರೆಯುವುದಲ್ಲ. ಜೀವನದಲ್ಲಿ ಒದಗಬಹುದಾದ ಎಲ್ಲಾ ರೀತಿಯ ಸಮಸ್ಯೆಗಳನ್ನು ವ್ಯಕ್ತಿಯು ತಾನೇ ಬಗೆಹರಿಸಿಕೊಳ್ಳಬಲ್ಲವನಾದಲ್ಲಿ ಆತನನ್ನು ಬುದ್ಧಿಶಾಲಿಯೆಂದೆ ಕರೆಯುತ್ತಾರೆ. ಈ ಕೆಳಕಂಡ ಅಂಶಗಳು ಬುದ್ಧಿ ಶಕ್ತಿಗೆ ಸಂಬಂಧಿಸಿದವುಗಳು.

1) ಸುಖವಾಗಿ ಜೀವಿಸಲು ಸ್ವತಂತ್ರ ಹಾಗೂ ಸಾರ್ಥಕ ಜೀವನ ನಡೆಸಲು ಬೇಕಾದ ಅನುಕೂಲಗಳನ್ನು ಕಲ್ಪಿಸಿಕೊಳ್ಳುವುದು.

2) ಸದ್ಗ್ರಂಥಗಳನ್ನು ಆರಿಸಿಕೊಂಡು ಓದಿ ಸ್ವತಂತ್ರವಾಗಿ ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಹೊಂದಿರುವುದು.



3) ವಿದ್ಯಾವಂತ ವ್ಯಕ್ತಿಗಳೊಂದಿಗೆ ಸಮರಸವಾಗಿ ವ್ಯವಹರಿಸುವ ಸಾಧ್ಯತೆ ಇರುವುದು.

4) ತನ್ನ ಸಮಾಜದ, ರಾಷ್ಟ್ರದ, ಇಡೀವಿಶ್ವದ ಪರಿಸ್ಥಿತಿಯನ್ನು ಅರಿಯುವ ಅರಿತು ಪ್ರತಿಸ್ಪಂಧಿಸುವ ಸಾಮರ್ಥ್ಯ ಇರುವುದು.

ಈ ಅಂಶಗಳೆಲ್ಲ ವ್ಯಕ್ತಿಯಲ್ಲಿ ಉಂಟಾಗುವುದು ಬುದ್ಧಿಶಕ್ತಿಯ ವಿಕಾಸ ಉಂಟಾದಾಗ ಮಾತ್ರ.

ವ್ಯಕ್ತಿಗೆ ಶರೀರ ಹೇಗೋ ಬುದ್ಧಿಯೂ ಒಂದು. ಶರೀರದ ಬೆಳವಣಿಗೆಗೆ ಮಿತಿ ಇರುತ್ತದೆ. ಆದರೆ ಬುದ್ಧಿಶಕ್ತಿಯ ಬೆಗವಣಿಗೆಗೆ ಮಿತಿ ಇರುವುದಿಲ್ಲ. ಇಂತಹ ಬುದ್ಧಿ ಶಕ್ತಿಯನ್ನು ಬೆಳೆಸುವಲ್ಲಿ ವ್ಯಕ್ತಿಯು ಎಷ್ಟು ಸಾಮರ್ಥನಾಗಿದ್ದಾನೆಂದರೆ, ಪ್ರತಿಸಣ್ಣ ವಿಷಯಗಳಿಗೂ ಕಂಪ್ಯೂಟರ್ ನಂತಹ ಸಾಧನಗಳನ್ನು ಬಳಸುವುದರಲ್ಲಿ ಸಮರ್ಥತೆ ಹೊಂದಿದ್ದಾನೆ. ಬುದ್ಧಿಶಕ್ತಿಯ ಸಾಮರ್ಥ್ಯವನ್ನು ಜಾಗ್ರತೆಯಾಗಿ ಹೆಚ್ಚಿಸಿಕೊಳ್ಳಲು ಸಾಧ್ಯವಿಲ್ಲ. ಹಂತಹಂತವಾಗಿ ಸ್ವಪ್ರಯತ್ನದಿಂದ ಹೆಚ್ಚಿಸಿಕೊಳ್ಳಬಹುದು. ಇದನ್ನು ಹೆಚ್ಚಿಸಿಕೊಳ್ಳಲು ನಾಲ್ಕು ಮುಖ್ಯ ಸಾಮರ್ಥ್ಯಗಳಿರಬೇಕು. ಅವುಗಳೇ ಅವಧಾನ, ಅಧ್ಯಯನ, ಆಲೋಚನೆ, ಪ್ರಾರ್ಥನೆ.

**ಅವಧಾನ :-** (Attention) ಜಾಗೃತ ಸ್ಥಿತಿಯ ಆಯ್ಕೆಯೆ ಅವಧಾನ. Attention is the concentration of conscious upon one object rather than upon another.

ಯಾವುದೇ ವಿಷಯದಲ್ಲಿ ಎಚ್ಚರದ ಮನಸ್ಸಿನಿಂದ ಗಮನ ನೀಡುವುದಕ್ಕೆ ಅವಧಾನ ಎನ್ನಬಹುದು. ಇಂದು ವಿದ್ಯಾರ್ಥಿಗಳು ಪುಸ್ತಕ ತೆರೆದು ಓದಲು ಪ್ರಾರಂಭಿಸುತ್ತಾರೆ. 2ನೇ ಪುಟಕ್ಕೆ ಬರುವ ವೇಳೆಗೆ ಮೊದಲನೇ ಪುಟದಲ್ಲಿ ಓದಿದ್ದನ್ನು ಮರೆತು ಬಿಡುತ್ತಾರೆ. ಇದಕ್ಕೆ ಕಾರಣವೇನು? ಅವಧಾನ ವಿಟ್ಟು ಕೇಳದೆ ಇರುವ ಮಾತುಗಳು, ಸಂಭಾಷಣೆಯೂ ಇದೇ ರೀತಿ ಎಂದು ಊಹಿಸಬಹುದಲ್ಲವೆ! ಈ ಅವಧಾನಕ್ಕೆ ತಕ್ಕಂತೆ ತಿಳುವಳಿಕೆ ಬೆಳೆಯುತ್ತದೆ. ಆದುದರಿಂದ ಜ್ಞಾನೇಂದ್ರಿಯಗಳ ಬಗ್ಗೆ ಹತೋಟಿ ತಂದುಕೊಂಡು ಕೇಳುವುದು, ನೋಡುವುದು, ಘ್ರಾಣಿಸುವುದು, ರುಚಿ ತಿಳಿಯುವುದು, ಸ್ಪರ್ಶಜ್ಞಾನ ಇತ್ಯಾದಿಗಳನ್ನು ಗಮನಿಸುತ್ತಿರಬೇಕು.

**ಅಧ್ಯಯನ :-**

ಬುದ್ಧಿಶಕ್ತಿ ಎಂಬುದು ಒಂದು ಪ್ರಧಾನ ಉಪಕರಣ. ಶಿಸ್ತುಬದ್ಧವಾಗಿ ಬುದ್ಧಿ ಬೆಳೆಯಬೇಕಾದರೆ ತೀಕ್ಷ್ಣವಾದ ಆಧ್ಯಯನ ಬೇಕಾಗುತ್ತದೆ. ವಿದ್ಯಾರ್ಥಿಗಳು ಅಭಿ

ರುಚಿಗೆ ತಕ್ಕಂತೆ ವಿಷಯ ಆರಿಸಿಕೊಂಡು ಶಾಂತ ಮನಸ್ಸಿನಿಂದ ಓದುತ್ತಾ, ಕಷ್ಟ ಪದಗಳನ್ನು ಆಗಿಂದಾಗ್ಗೆ ಗುರುತು ಹಾಕಿಕೊಂಡು ಅದರ ಅರ್ಥ ತಿಳಿಯುತ್ತಾ ಸಂದರ್ಭಕ್ಕನುಗುಣವಾಗಿ ಅದನ್ನು ಮೆಲುಕು ಹಾಕುವುದು ಅಧ್ಯಯನ ಎಂದು ಹೇಳಬಹುದು. ಅಧ್ಯಯನವೇ ಬೇರೆ, ಓದುವುದು ಬೇರೆ. ಇಂದಿನ ವಿದ್ಯಾರ್ಥಿಗಳು ಕೇವಲ ಓದಬಹುದು ಅದು ಅರ್ಥವತ್ತಾದ ಅಧ್ಯಯನವಲ್ಲ. ಪರೀಕ್ಷೆಗೆ ಸಾಕಾಗುವಷ್ಟು ಅಂಶಗಳನ್ನು ಮಾತ್ರ ಹೃದ್ಘಟ ಮಾಡಿಕೊಂಡು ಪರೀಕ್ಷೆಯಲ್ಲಿ ಉಗುಳುವುದು. ಅದಕ್ಕೆ ತಕ್ಕಂತೆ ಅಂಕ ಪಡೆಯುವುದು. ಸಂಪೂರ್ಣ ಅಧ್ಯಯನ ನಡೆಸಿದ ವ್ಯಕ್ತಿಯು ಅಥವಾ ವಿದ್ಯಾರ್ಥಿಯು ಯಾವುದೇ ಸಂದರ್ಭದಲ್ಲಿ ಅದನ್ನು ಸಂದರ್ಭಕ್ಕನುಗುಣವಾಗಿ ಹೇಳುವಷ್ಟಿರಬೇಕು. ಇದುಮಿತಿಯಾದ ಜ್ಞಾನ. ಕೇವಲ ವೃತ್ತಿಗೋಸ್ಕರವಾದ ಅಧ್ಯಯನ ಇದು. ಭಾಷೆಯನ್ನು ಸರಿಯಾಗಿ ಬಲ್ಲವನು ಯಾವ ವಿಷಯಕೊಟ್ಟರೂ ಓದಬಲ್ಲ. ಆದರೆ ಅದರ ಪೂರ್ಣ ಚಿತ್ರ ಮನಸ್ಸಿನ ಪಟಲದ ಮೇಲೆ ಪ್ರತಿ ಬಿಂಬಿಸಬೇಕಾದರೆ ಅದನ್ನು ವಿಶ್ಲೇಷಿಸಿ ಅರ್ಥೈಸಿದರೆ ಮಾತ್ರ ಅಧ್ಯಯನವಾಗಿದೆ ಎಂದು ಹೇಳಬಹುದು. ಅಧ್ಯಯನ ಹೆಚ್ಚಿದಷ್ಟು ಬೌದ್ಧಿಕಶಕ್ತಿ ತೀಕ್ಷ್ಣವಾಗಿ ಹೆಚ್ಚುತ್ತದೆ.

**ಆಲೋಚನೆ :-**

ವ್ಯಕ್ತಿಯು ತನ್ನ ಜೀವನದ ಜಂಜಾಟದಿಂದ ಬಿಡಿಸಿಕೊಳ್ಳುವದಕ್ಕೆ ಪರಿಹಾರ ಹುಡುಕುವ ಸಲುವಾಗಿ ಮನಸ್ಸನ್ನು ಕಾರ್ಯರೂಪಕ್ಕೆ ತರುವಂತೆ ಪ್ರಚೋದಿಸುವುದೇ ಆಲೋಚನೆ. ಬುದ್ಧಿಯಿಂದ ಆಲೋಚನೆ ಹೊರಹೊಮ್ಮುತ್ತದೆ ಆಲೋಚನೆಯಿಂದ ಬೆಳೆಯುತ್ತದೆ. ಅವಧಾನವಿಟ್ಟು ಕಾಣುವುದು. ಕಂಡದ್ದನ್ನು ಅಲೋಚಿಸುವುದು, ಆಲೋಚಿಸಿದ್ದನ್ನು ಬುದ್ಧಿಶಕ್ತಿಗೆ ಪರಿವರ್ತಿಸುವುದು "Think before you speak" ಆಲೋಚನೆಗೆ ಪರ್ಯಾಯಪದವೇ ಚಿಂತನೆ. ಚಿಂತನೆ ಮಾಡುವುದರಿಂದ ಜ್ಞಾನ ಬಲಪಡುತ್ತದೆ ಚಿಂತೆ ಮಾಡುವುದರಿಂದ ಜ್ಞಾನದಮಟ್ಟ ಇಳಿಯುವುದರ ಜೊತೆಗೆ ನರಗಳ ಮೇಲೆ ಋಣಾತ್ಮಕ ಪ್ರಚೋದನೆಗೆ ಅವಕಾಶವುಂಟಾಗುತ್ತದೆ. ಇಂದು ಚಿಂತೆಮಾಡುವವರ ಸಂಖ್ಯೆ ಹೆಚ್ಚು ಚಿಂತನೆಮಾಡುವರ್‍ಯಾರು!

ಪುರಾಂದರದಾಸರವಾಣಿಯಲ್ಲಿ "ಎಂತಾದರೂ ಚಿಂತೆ ಬಿಡದು! ನಿಶ್ಚಿಂತರಾದವರ ನಾನೊಬ್ಬರನು ಕಾಣೆ, ಎಂಬಂತೆ ಇದು ಯಾರಿಗೂ ಬಿಟ್ಟದ್ದಲ್ಲ. !
ಸುಭಾಷಿತದಲ್ಲಿರುವಂತೆ–ಚಿಂತಾಯಾಸ್ತು ಚಿತಾಯಾಸ್ತು ಬಿಂದು ಮಾತ್ರ ವಿಶೇಷತಃ
ಚಿಂತಾ ದಹತಿ ಜೀವಂ ಚಿತಾದಹತಿ ನಿರ್ಜೀವಿನಃ !

ಚಿಂತೆ, ಚಿತೆ ಇದರಲ್ಲಿ 'O'ಮಾತ್ರ ವಿಶೇಷವಾಗಿದೆ. ಚಿಂತೆಯು ಜೀವವನ್ನು ಸವೆಸುತ್ತದೆ. ಆದರೆ ಚಿಂತನೆ ಮಾಡುವುದು ಇವೆರಡಕ್ಕೂ ವಿರುದ್ಧವಾದದು. ವಿವೇಕ ಹೆಚ್ಚುತ್ತದೆ. ಬುದ್ಧಿಶಕ್ತಿ ವಿಕಾಸಕ್ಕೆ ಸಹಕರಿಸುತ್ತದೆ. ಸಮರ್ಥಿಸುತ್ತದೆ. ವ್ಯಕ್ತಿತ್ವವು ರೂಪಿಸಲ್ಪಡುತ್ತದೆ.



**ವ್ಯಕ್ತಿತ್ವ ನಿರ್ಮಾಣದಲ್ಲಿ ಇವುಗಳ ಪಾತ್ರ :-**

ಬೌದ್ಧಿಕ ಶಕ್ತಿ ವಿಕಾಸ ಮಾಡಿಕೊಂಡಾಗ ಒಳ್ಳೆಯ ವ್ಯಕ್ತಿತ್ವ ರೂಪಿಸಿಕೊಳ್ಳಬಹುದೆಂಬುದನ್ನು ಈವರೆವಿಗೂ ತಿಳಿಯಯಿಲಾತು. ಯಾವುದೇ ಧನಾತ್ಮಕ ಮಾರ್ಪಾಟೆಲ್ಲಾ ಕಲಿಕೆ ಅಥವಾ ಶಿಕ್ಷಣ ಎಂದು ಹೇಳಬವುದಲ್ಲವೆ? ಇಂದಿನ ನಮ್ಮ ಶಿಕ್ಷಣವು ಗಿಣಿಪಾಠ ಅಥವಾ ಸರ್ಕಸ್ ಪ್ರಾಣಿಗಳನ್ನು ಪಳಗಿಸಿ ಜೀವನಮಾರ್ಗಕ್ಕೆ ಬಳಸಿಕೊಳ್ಳುವಂತಿದೆ. ತಂದೆ ತಾಯಿಯರು ಮಕ್ಕಳನ್ನು ಶಾಲೆಕಾಲೇಜುಗಳಿಗೆ ಸೇರಿಸಿ ವಿದ್ಯಾಭ್ಯಾಸ ನಡೆಸುವಲ್ಲಿ ಎಷ್ಟರ ಮಟ್ಟಿಗೆ ಎಡವುತ್ತಿದ್ದಾರೆಂದರೆ ಸತ್ಪ್ರಜೆಯಾಗುವುದಕ್ಕಿಂತ ಒಂದು ಸರ್ಟಿಫಿಕೇಟ್ ಪಡೆಯುವುದರ ಕಡೆಗೆ ಗಮನ. ಇಂದಿನ ಜನಸಂಖ್ಯಾ ಸ್ಫೋಟನದಿಂದಲೂ ಪ್ರಕೃತಿ ವಿಕೋಪದಿಂದಲೂ ಪರಿಹಾರ ಒದಗಿಸಿಕೊಳ್ಳುವುದರಲ್ಲಿ ಈ ಪದವಿಗಳಾಗಲೀ ಸರ್ಟಿಫಿಕೇಟ್‌ಗಳಾಗಲೀ ಪ್ರಯೋಜನವೆ ಎಂಬುದನ್ನು ಗಮನಿಸಿ. ಕ್ರಮಬದ್ಧವಾದ ಅಧ್ಯಯನ, ಆಲೋಚನೆ, ಅವಧಾನವಿಲ್ಲದ ಆಥವಾ ಇದರ ಬಗ್ಗೆ ಗಮನವಿಲ್ಲದ ಇಂದಿನ ವಿದ್ಯಾರ್ಥಿಗಳಲ್ಲಿ ವಿವೇಕ ಶಕ್ತಿ ಮೂಡದಿದ್ದರೆ ಅವರ ಭವಿಷ್ಯವನ್ನು ರೂಪಿಸಿಕೊಳ್ಳಲು ಕಾರಣರಾಗುವ ವ್ಯಕ್ತಿಗಳಾರು? ವಿದೇಶಿಯ ತಜ್ಞರು ಹೇಳಿರುವ ಮಾತು ನಮ್ಮ ದೇಶಕ್ಕೆ ಅನ್ವಯಿಸಿದಂತೆ ಈ ರೀತಿ ಇದೆ.

India is rich in resources but poor in Produces. In the same way Japan is poor in resources but rich in produces. ಶ್ರೀಮಂತಿಕೆ ಮತ್ತು ಬಡತನವನ್ನು ಇಲ್ಲಿ ಯಾವರೀತಿ ವಿಮರ್ಶಿಸಲಾಗಿದೆ. ನಮ್ಮ ದೇಶದ ಕಲ್ಲನ್ನು ವಿದೇಶಿಯರು ಚಿನ್ನದಂತೆ ಕಾಣುತ್ತಾರೆ ಎಂದರೆ ಇಲ್ಲಿನ ಕಲ್ಲುಗಳನ್ನು ವಿದೇಶೀಯರು ಪಡೆಯುವುದರ ಜೊತೆಗೆ ಹೆಚ್ಚಿನ ಪ್ರಯೋಜನ ಪಡೆಯುತ್ತಾರೆಂಬುದನ್ನು ನಾವು ತಿಳಿಯಬಹುದು. ಇಂದಿನ ನಮ್ಮ ವಿದ್ಯಾರ್ಥಿಗಳು ಯೋಚನಾಪ್ರಿಯರು. ಆಲೋಚನೆ ಬಗ್ಗೆ ಅವರಿಗೆ ಅರಿವು ಕಡಿಮೆ. ನಮ್ಮ ಬಾಹ್ಯ ದೃಷ್ಟಿಗೆ ಬಳಸಿಕೊಳ್ಳುವ ಕನ್ನಡಕಗಳಂತೆ ಈ ಆಲೋಚನೆಗಳು ಇದೇ ರೀತಿ **ದೂರಾಲೋಚನೆ ಮತ್ತು ಮುಂದಾಲೋಚನೆಗಳು.** ವ್ಯಕ್ತಿಗಳಲ್ಲಿ **ದುರಾಲೋಚನೆ** ಇರಬಾರದು. ಇಂದು ದೃಷ್ಟಿದೋಷಕ್ಕೋಸ್ಕರ ಕನ್ನಡಕ ಬಳಸುವ ಬದಲು ಮೋಜಿಗೆ ಬಳಸುವಂತೆ ಇದೆ ನಮ್ಮ ವಿದ್ಯಾರ್ಥಿಗಳ ಆಲೋಚನೆ. ಇಂದಿನ ವಿದ್ಯಾರ್ಥಿಗಳಲ್ಲಿ ಬಹುಪಾಲು ಆಲೋಚನೆಗಳು ಕೇವಲ ಅಧ್ಯಯನಕ್ಕೆ ಸಂಬಂಧಪಟ್ಟವಲ್ಲ ಇವುಗಳಿಂದ ಬೌದ್ಧಿಕ ಶಕ್ತಿಯು ನಷ್ಟವೇ ಹೊರತು ಆ ಸಂದರ್ಭದಲ್ಲಿ ಪ್ರಯೋಜನ ಕಾರಿಯಲ್ಲ. ಒಂದಂತು ಸಹಜ. ಯಾವ ಪುರುಷನೇ ಆಗಲೀ ಜೀವಿಯಾಗಲೀ ಆಯಾ ಕಾಲಕ್ಕೆ ತಕ್ಕಂತೆ ಬೆಳವಣಿಗೆಯ ಹಂತದಲ್ಲಿ ಬುದ್ಧಿವಿಕಾಸಕ್ಕೆ ಮನಸ್ಸು ಮಾಡಿಕೊಂಡಾಗಲೇ ಅದರ ಪ್ರಯೋಜನ. ಆಗದಿದ್ದಾಗ ವ್ಯಥೆಪಡಬೇಕಾಗುತ್ತದೆ. ಆದಿಶಂಕರರು ತಮ್ಮ ದ್ವಾದಶಮಂಜರಿ ಶ್ಲೋಕಗಳಲ್ಲಿ ಈ ರೀತಿ ಹೇಳುತ್ತಾರೆ.

ಬಾಲಸ್ತಾವತ್ ಕ್ರೀಡಾಸಕ್ತ ತರುಣಸ್ತಾವತ್ ತರುಣೀಸಕ್ತ
ವೃದ್ಧ ಸ್ತಾವತ್ ಚಿಂತಾಸಕ್ತ ಪರಬ್ರಹ್ಮಣಕೋಪಿನ ಸಕ್ತ ಃ॥

ವ್ಯಕ್ತಿ ನಿರ್ಮಾಣದಲ್ಲಿ ಇಂದಿನ ಶಿಕ್ಷಣವೇ ಆಗಲೀ, ಸಮಾಜವೇ ಆಗಲಿ ಸಫಲವಾಗದಿರುವುದು ಇದೇ ಕಾರಣವೆಂಬುದು ಹೇಳಬೇಕಾಗಿಲ್ಲ. 'ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ.' ಗಿಡಗಳು ಫಸಲಿಗೆ ಬಂದಾಗ ಅದಕ್ಕೆ ಆರೈಕೆ ಯೋಗ್ಯವೇ? ಹಂತ ಹಂತವಾಗಿ ಅವುಗಳನ್ನು ಪೂರೈಸಿದರೆ ಮಾತ್ರ ಸಾಧ್ಯ. 'As you sow, so you reap' ಈ ಅಂಶಗಳನ್ನು ಮನನಮಾಡಿಕೊಳ್ಳುತ್ತಾ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿದಾಗ ಮಾತ್ರ ಸುಖಜೀವನಸಾಧ್ಯ.

ತೈತ್ತರೀಯೋಪನಿಷತ್ತಿನಲ್ಲಿ "ಸಮೋದ್ರೋ ವೇಧಯಾಸ್ಪ್ರೃಣೊಂತು" ಎಂಬ ಪ್ರಾರ್ಥನೆಯಿದೆ. ಇದರ ಅರ್ಥ ಆ ಇಂದ್ರನು ತನ್ನ ಮೇಧಾಶಕ್ತಿ ಅಂದರೆ ಬುದ್ಧಿಶಕ್ತಿಯನ್ನು ಬಲಗೊಳಿಸಲಿ ಎಂದು. ಇಲ್ಲಿ ಇಂದ್ರ ಎಂದರೆ ಸ್ವರ್ಗಾಧಿಪತಿಯಾದ ದೇವೇಂದ್ರನಲ್ಲ. ಓಂಕಾರ ಸ್ವರೂಪಿಯಾದ ಪರಮಾತ್ಮ. ಸ್ವಾಮಿ ವಿವೇಕಾನಂದರು ಬುದ್ಧಿಶಕ್ತಿ ನಷ್ಟದಿಂದ ಆಗುವ ಅನಾಹುತದ ಬಗ್ಗೆ ಈ ರೀತಿ ಹೇಳುತ್ತಾರೆ.

There are thousands to weaken us, and of stories we have had enough. Therefore my friends, as one of your blood, as one that lives and dies with you, let me tell you that we want strength, strength, every time strength. The Upanishads are the great mines of strength.

ಹಿಂದಿನ ಸಂಚಿಕೆಯಲ್ಲಿ ಪ್ರಾರ್ಥನೆಯ ಮಹತ್ವವನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದ್ದು, ಇದು ಶಿಕ್ಷಣ ಕ್ಷೇತ್ರದಲ್ಲಿ ಎಷ್ಟರ ಮಟ್ಟಿಗೆ ಪರಿಣಾಮಕಾರಿಯಾಗುತ್ತದೆಂದು ತಿಳಿಸಲಾಗಿತ್ತು. ಇದನ್ನು ವಿವರಿಸಿದಷ್ಟು ಮುಗಿಯುವಂತಿಲ್ಲ. ಇಂತಹ ಶಿಕ್ಷಣ ಮತ್ತು ಅನುಭವದ್ದೇ ಹೊರತು ಹೇಳುವುದಲ್ಲ. ಕೇಳಿ ಆನಂದಪಡುವುದಲ್ಲ ಮಾಡಿ ಆನಂದಿಸುವುದು.

**ಸೂಚನೆ :–**

[ಇಂಗ್ಲಿಷ್ ಪದದ Muscles of Nervesಗೆ ಬದಲಾಗಿ nevers ಎಂದು ಮುದ್ರಿತವಾಗಿದೆ; ಪ್ರಾಣಾಯಾಮಕ್ಕೆ ಬದಲಾಗಿ ಪ್ರಾಣಾಪಾಯ ಎಂಬುದಾಗಿ ಮುದ್ರಿತವಾಗಿದೆ ಸರಿಪಡಿಸಿಕೊಳ್ಳಿ.]



**ಶಿಕ್ಷಣದಲ್ಲಿ ಏಕಾಗ್ರತೆಯ ಮಹತ್ವ :– [CONCENTRATION]**

ಅಧ್ಯಯನದಲ್ಲಿ ಅತಿ ಮುಖ್ಯವಾದಸ್ಥಾನ ಪಡೆದಿದೆ ಈ ಏಕಾಗ್ರತೆ. ಅಧ್ಯಯನ ನಡೆಸಿದ್ದನ್ನು ಸುಲಭವಾಗಿ ನೆನಪಿನಲ್ಲಿಡಬೇಕಾದರೆ ಈ ಏಕಾಗ್ರತೆ ಪ್ರಮುಖಪಾತ್ರ ವಹಿಸುತ್ತದೆ. ಏಕಾಗ್ರತೆಯಿಲ್ಲದೆ ಯಾವ ಕಾರ್ಯವೂ ಸಮರ್ಪಕವಾದ ಫಲವನ್ನು ಕೊಡುವುದಿಲ್ಲ. ಇಂದು ನಮ್ಮ ವಿದ್ಯಾರ್ಥಿಗಳಲ್ಲಿ ಶ್ರದ್ಧೆ, ಏಕಾಗ್ರತೆ, ಸಮಯಪ್ರಜ್ಞೆ ವಿಧೇಯತೆ, ಶ್ರಮದ ಅರಿವು, ತ್ಯಾಗಬುದ್ಧಿ ಮುಂತಾದುವುಗಳ ಕೊರತೆಯ ಪರಿಣಾಮವಾಗಿ ಇಂದು ಶಿಕ್ಷಣ ಪಡೆದವರನ್ನು ಪಡೆಯದವರೊಡನೆ ಪ್ರತ್ಯೇಕಿಸುವುದು ಕಷ್ಟವಾಗಿದೆ. ಈ ಅಂಶಗಳು ಕೇವಲ ವಿದ್ಯಾರ್ಥಿಗಳಿಗೆ ಮಾತ್ರ ಸೀಮಿತವಲ್ಲ, ಮಾನವ ಜನ್ಮಕ್ಕೆ ಯಶಸ್ಸಿನ ರಹಸ್ಯದ ಗುಟ್ಟಿನ ಅಂಶಗಳು.

**ಏಕಾಗ್ರತೆಯನ್ನು ತಂದುಕೊಳ್ಳುವುದು ಹೇಗೆ?**

ಏಕ ಎಂದರೆ ಒಂದು, ಅಗ್ರ ಎಂದರೆ ತುದಿ. ಏಕಾಗ್ರತೆ ಯೆಂದರೆ ಒಮ್ಮುಖವಾಗಿರುವುದು. ಇದು ಮನಸ್ಸಿಗೆ ಸಂಬಂಧಪಟ್ಟ ವಿಷಯ. ಸ್ವಭಾವತಃ ಮನಸ್ಸು ಚಂಚಲ. ಇದನ್ನವಲಂಬಿಸಿ ಕಾರ್ಯ ನಿರ್ವಹಿಸುತ್ತಿರುವುದು ಇಂದ್ರಿಯಗಳು. ಈ ಇಂದ್ರಿಯಗಳು ಮನಸ್ಸನ್ನು ತಮ್ಮೆಡೆಗೆ ಸದಾ ಸೆಳೆಯುತ್ತಲೇ ಇರುತ್ತವೆ. ಇದರ ಜೊತೆಗೆ ಮನಸ್ಸಿಗೆ ತನ್ನದೇ ಆದ ಬಗೆ ಬಗೆಯ ಆಸೆಗಳಿರುತ್ತವೆ. ಈ ಆಸೆಗಳ ಸೆಳೆತಕ್ಕೆ ಇಂದ್ರಿಯಗಳ ಸಹಕಾರದಿಂದ ಮನಸ್ಸು ಮರ್ಕಟದಂತೆ ವರ್ತಿಸುತ್ತದೆ.

**ಮನಸ್ಸನ್ನು ಸುಶಿಕ್ಷಿತಗೊಳಿಸುವ ಉಪಾಯ :–**

ಬುದ್ಧಿಶಕ್ತಿಯ ವಿಕಾಸವೇ ಶಿಕ್ಷಣವಾದರೆ, ಮನಸ್ಸಿಗೆ ಬೇರೆ ಶಿಕ್ಷಣ ಕೊಡಬೇಕಾಗ್ತುದೆ. (Education to the mind) ಮನಸ್ಸು ಶರೀರಕ್ಕೆ ಅಂಟಿಕೊಂಡಿದೆ ಸರಿ. ಆದರೆ ನಾವು ಹಿಂದೆ ತಿಳಿದಂತೆ ಆತ್ಮ ಎಂಬ ಶಕ್ತಿ ಶರೀರದೊಡನೆ ಸ್ವಚ್ಛಂದವಾಗಿದೆ ಮನಸ್ಸು ಆತ್ಮದೊಡನೆ ಇರುತ್ತದೆ. ಶರೀರ ಮತ್ತು ಆತ್ಮ ಇವೆಂಡೂ ಬೇರೆಯಾದಾಗ ಶರೀರ ಜಡವಸ್ತುವಾಗುತ್ತದೆ. ಆಗ ಸಾವು ಎಂದು ಹೇಳಲಾಗುತ್ತದೆ. ಮನಸ್ಸು ಒಂದು ವಿಷಯದ ಕಡೆ ಒಂದು ಸಲವಿದ್ದರೆ ಮಾತ್ರ ಏಕಾಗ್ರತೆ ಮೂಡುತ್ತದೆ. ಇದು ಬೇರೆ ಬೇರೆ ಕಡೆ ಅಲೆದಾಗ ಯಾವ ಯಾವಕಡೆ ಚಲಿಸುತ್ತಲಿರುತ್ತದೆಯೋ ಅಲ್ಲಲ್ಲಿ ಕೆಲಕಾಲವಿದ್ದು ಸಂಪೂರ್ಣವಾಗದಂತಹ ಪರಿಸ್ಥಿತಿಗೆ ತಲುಪುತ್ತದೆ. ಒಂದೊಂದು ಅಂಶವನ್ನು ಸಂಪೂರ್ಣ ಮಾಡುತ್ತ ಹೋದಾಗ ಮಾತ್ರ ಪೂರ್ಣ ಫಲ ದೊರೆಯುತ್ತದೆ.

**ಮನಸ್ಸು ಒಂದು ಮರ್ಕಟ :–**

ಈ ಕೆಳಗಿನ ಸಾಲುಗಳನ್ನು ಹಾಡಿನ ರೂಪದಲ್ಲಿ ಬರೆಯಲಾಗಿದೆ. ರಾಗ, ತಾಳ ಮತ್ತು ಶೃತಿಗಳಿಗನುಗುಣವಾಗಿ ಹಾಡಿದರೆ ಭಾವ ಮೂಡುತ್ತದೆ. ಅರ್ಥ ತಿಳಿದರಂತೂ ಮನಸ್ಸಿನ ಮರ್ಮ ಗೊತ್ತಾಗುತ್ತದೆ. ರಚನಕಾರರು ಷಣ್ಮುಖಸ್ವಾಮಿ ಈ ರೀತಿಇದೆ.

ಮನವೆಂಬ ಮರ್ಕಟನು ತನುವೆಂಬ ವೃಕ್ಷವನೇರಿ
ಇಂದ್ರಿಯಂಗಳೆಂಬ ಶಾಖೆ ಶಾಖೆಗೆ ಹಾರಿ
ವಿಷಯಂಗಳೆಂಬ ಫಲಂಗಳ ಗ್ರಹಿಸಿ
ಭವದತ್ತಾ ಮುಖವಾಗಿ ಹೋಗುತಿದೆ ನೋಡಾ ||೧||
ಮನವೆಂಬ ಮರ್ಕಟನ
ನಿಮ್ಮ ನೆನಹೆಂಬ ಪಾಶದಿ ಕಟ್ಟಿ
ಎನ್ನನುಳಿಸಿಕೊಳ್ಳಯ್ಯ ಅಖಂಡೇಶ್ವರಾ ||೨||

ಐದು ಇಂದ್ರಿಯಗಳು ಶರೀರವೆಂಬ ವೃಕ್ಷದ ಶಾಖೆಗಳು. ಮನಸ್ಸು ಒಂದು ಮಂಗ ಈ ವೃಕ್ಷದ ಕೊಂಬೆಗಳಿಗೆ ಅತ್ತಿಂದಿತ್ತ ಹಾರುತ್ತಿರುತ್ತದೆ. ಕೋತಿಯು ಇದೇ ರೀತಿ ಮರದಲ್ಲಿ ಜಿಗಿದಾಡುವುದು. ಇಲ್ಲಿ ವಿಷಯಾಸಕ್ತರಾದವರು ಪ್ರತಿಯೊಂದನ್ನೂ ಆಸೆಪಟ್ಟು ಪಡೆಯಲು ಸಾಗುವರು. ಇದರಿಂದ ಪ್ರಯೋಜನವೇನಾದರೂ ಕಾಣಬಹುದೆ? ಈ ಮಂಗನನ್ನು ನೆನಪು ಎಂಬ ಶಕ್ತಿಯಿಂದ ಬಂಧಿಸಿ ತನ್ನ ಏಕಾಗ್ರತೆಯ ಕಡೆಗೆ ಬಿಟ್ಟಾಗ ಮಾತ್ರ ತಾವು ನಿರೀಕ್ಷಿಸಿದ ಫಲ ದೊರೆಕಿಸಿಕೊಳ್ಳಬಹುದಲ್ಲದೆ, ಮನಸ್ಸನ್ನು ನಿಶ್ಚಲಗೊಳಿಸಬಹುದು. ವಸ್ತು ಪ್ರಪಂಚದ ಕಡೆ ಮನಸ್ಸನ್ನು ಹರಿಯಬಿಟ್ಟರೆ ವ್ಯಕ್ತಿಯ ಮನಸ್ಸು ಚಂಚಲಗೊಳ್ಳುತ್ತದೆ.

ಭಗವದ್ಗೀತೆಯ ಎರಡನೆ ಅಧ್ಯಾಯದಲ್ಲಿ ಇದನ್ನೇ ಈ ರೀತಿ ಹೇಳಲಾಗಿದೆ.
ಧ್ಯಾಯತೋ ವಿಷಯಾನ್ ಪುಂಸ ಸಂಗಸೊಪಜಾಯತಿ
ಸಂಗಾತ್ ಸಂಜಾಯತೆ ಕಾಮ ಕ್ರೋಧೋಬಿಜಾತೆ.
ಕ್ರೋದಾದ್ಭವತಿ ಸಂಮೋಹತ್ ಸಂಮೋಹಾತ್ ಸ್ಮೃತಿ ವಿಭ್ರಮ.
ಸ್ಮೃತಿಭ್ರಂಶೋ ಬುದ್ಧಿನಾಶ್ ತ್ಃ ಬುದ್ಧಿ ನಾಶಾತ್ ಪ್ರಣಶ್ಯತಿ
ಮನಸ್ಸನ್ನು ಏಕಾಗ್ರಗೊಳಿಸದಿದ್ದಾಗ ಬುದ್ಧಿ ಯಾವ ರೀತಿ ಕೆಲಸ ಮಾಡುತ್ತದೆಂಬುದನ್ನು ತಿಳಿಯಲಾಯಿತು.

**ಶಿಕ್ಷಣ ಕ್ಷೇತ್ರದಲ್ಲಿ ಇಂದು ಕಾಣುತ್ತಿರವುದೇನು ?**

ಏಕಾಗ್ರತೆಯ ಗುಣವನ್ನು ಒಂದು ರೇಷ್ಮೆಯಹುಳು ತನ್ನ ಗೂಡನ್ನು ಕಟ್ಟಲು ಪ್ರಾರಂಭಿಸುತ್ತಾ ಪೂರೈಸುವುದರ ಕಡೆಗೆ ನೋಡೋಣ. ಸುಮಾರು 30 ದಿವಸಗಳಷ್ಟೆ ಜೀವನಸಾಗಿಸಿ, ಅಂತಿಮವಾಗಿ ಮಾನವನಿಗೆ ಪ್ರಯೋಜನಕಾರಿಯಾಗಿ ಬಾಳ್ಮೆನಡೆಸಲು ಒಂದು ಹುಳುವಿನ ಜೀವನ ಚರಿತ್ರೆಯನ್ನು ಗಮನಿಸಿ, ಕೂದಲೆಳೆಯಷ್ಟು ಚಿಕ್ಕದಾದ ಈ ಹುಳುವು ಕೊನೆಗೆ ರೇಷ್ಮೆ ಎಳೆಯನ್ನು ತನ್ನ ಬಾಯಿಂದ ಹೊರಗೆ ಬಿಡುತ್ತಾ ಮೈಲಿಗಟ್ಟಲೆ ಉದ್ದದಷ್ಟು ದಾರವನ್ನು ಬಿಕ್ಕಟ್ಟಿನಿಂದ ಸುತ್ತುತ್ತಾ ಕೊನೆಗೆ ಒಳಗೆ ಸೇರುತ್ತದೆ. ಇದೇನಾದರೂ ತನ್ನ ಏಕಾಗ್ರತೆಯನ್ನು ಬದಲಿಸಿದರೆ ಮಾನವನು ಇದರಿಂದ ಏನನ್ನೂ ಅಪೇಕ್ಷಿಸಲಾರ.



ಇಂದು ನಮ್ಮ ಸಮಾಜದಲ್ಲಿ ಹೆಚ್ಚಾಗಿ ಕಾಣುತ್ತಿರುವುದೇನು ? ಏಕಾಗ್ರತೆಯಿಂದ ಅಧ್ಯಯನ ನಡೆಸುತ್ತಾ ಬಿಲ್ಲುವಿದ್ಯೆಯಲ್ಲಿ ಪರಿಣತೆ ಗಳಿಸಿದ್ದ ಏಕಲವ್ಯನು ದ್ರೋಣರು ಧನುರ್ವಿದ್ಯೆ ಹೇಳಿಕೊಡಲು ನಿರಾಕರಿಸಿದ್ದರೂ ಅವರ ಪ್ರತಿಮೆಗೆ ಮಹತ್ವ ಕೊಡುವುದಕ್ಕಿಂತಲೂ ಅವರಲ್ಲಿರುವ ಶಕ್ತಿಯನ್ನು ಆರ್ಕಷಿಸಿದನು. ಇಂದಿನ ನಮ್ಮ ವಿದ್ಯಾರ್ಥಿಗಳು ಶಿಕ್ಷಕರು ವಿವಿಧ ಭಾಗಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರು ಏಕಾಗ್ರತೆ ಕಳೆಕೊಂಡರೆ ಅಗುವ ಅನಾಹುತಕ್ಕೆ ಅವರವರೇ ಕಾರಣರು. ಮನಸ್ಸು ಎಂಬದು ವ್ಯಕ್ತಿಗೆ ಸೀಮಿತವಾದದ್ದು. ನಮ್ಮ ವಿದ್ಯಾರ್ಥಿಗಳಲ್ಲಿ ಇಂದು ಶ್ರದ್ಧೆ, ಭಕ್ತಿ, ಏಕಾಗ್ರತೆ ಎಂಬ ಅಂಶಗಳು ಮಾಯವಾಗುತ್ತಿದೆ. ಏಕಾಗ್ರತೆಯಿಂದ ಅಧ್ಯಯನ ನಡೆಸಿದ ವಿದ್ಯಾರ್ಥಿಯು ತನ್ನ ಭವಿಷ್ಯ ರೂಪಿಸುವುದರಲ್ಲಿ ಯಶಸ್ಸು ಕಾಣುತ್ತಾನೆ. ವಿದ್ಯಾಭ್ಯಾಸದ ನಂತರವೂ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳುತ್ತಾನೆ.

ಇಂದಿನ ನಮ್ಮ ವಿದ್ಯಾರ್ಥಿಗಳು ಪಾಶ್ಚಾತ್ಯ ನಾಗರಿಕತೆಗೆ ಮರುಳಾಗಿಯೋ ಅಥವಾ ಕಲಿಗಾಲದ ಪ್ರಭಾವದಿಂದಲೋ ತಮ್ಮ ಇಂದ್ರಿಯಗಳನ್ನು ಸ್ವೇಚ್ಛೆಯಾಗಿ ಹರಿಯಗೊಟ್ಟಿರುತ್ತಾರೆ. ಇಂತಹ ವಿದ್ಯಾರ್ಥಿಗಳಿಗೆ ಯುವಕರಿಗೆ ವಿವೇಕ ಹೇಳುವರಾರು? ಶರೀರ ಮತ್ತು ಇಂದ್ರಿಯಗಳ ಸ್ವಭಾವವನ್ನರಿಯದೆ ಅವುಗಳನ್ನು ಯದ್ವಾತದ್ವ ಬಳಸಿದಾಗ ಭೀಕರ ದುಷ್ಪರಿಣಾಮಗಳು ಎರಗಿ ಶಾಂತಿ-ಸೌಖ್ಯ ಸಮಾಧಾನಗಳನ್ನೆಲ್ಲ ಕೊಚ್ಚಿ ಹೋಗುವಂತಾಗುತ್ತದೆ.

ಇಂದು ಅಧ್ಯಯನವನ್ನು ಪರೀಕ್ಷೆಯ ಸಿದ್ಧತೆ ಎಂದು ಪರಿಗಣಿಸಲಾಗಿದೆ. ತಾತ್ಕಾಲಿಕ ತಯಾರಿಯಿಂದ ವಿದ್ಯಾಭ್ಯಾಸ ಮಾಡಿ "ಯುದ್ಧಕಾಲ ಶಸ್ತ್ರಭ್ಯಾಸ"ದಂತೆ ಯಾವ ಫಲಕೊಡಬಲ್ಲದು ? ಆದ್ದರಿಂದ ಎಲ್ಲಿ ಪ್ರೀತಿ ಇರುತ್ತದೆಯೋ ಅಲ್ಲಿ ನಮ್ಮ ಮನಸ್ಸಿರುತ್ತದೆ. ಎಲ್ಲಿ ನಮ್ಮ ಮನಸ್ಸಿರುತ್ತದೆಯೋ ಅಲ್ಲಿ ಏಕಾಗ್ರತೆ ಮೂಡಿ ಬರುತ್ತದೆ. ಓದಿ ಓದಿ ಅಭ್ಯಾಸ ಮಾಡುವುದರಿಂದ ಬರವಣಿಗೆ ಅಂದವಾಗುತ್ತದೆ. ಶ್ರದ್ಧೆಯಿಂದ ಅಭ್ಯಾಸಮಾಡಬೇಕು. ಉತ್ಸಾಹದಿಂದ ಅಭ್ಯಾಸಮಾಡಬೇಕು. ಇದರಿಂದ ಏಕಾಗ್ರತೆ ಬರುತ್ತದೆ.

**ವ್ಯಕ್ತಿತ್ವ ನಿರ್ಮಾಣದಲ್ಲಿ ತ್ಯಾಗ ಮತ್ತು ಸೇವೆಯ ಪಾತ್ರ :-**

ಸೇವೆ ಮತ್ತು ತ್ಯಾಗಎಂಬುದು ನಿರಂತರ ಪ್ರೀತಿಯೆ. ಅದರಲ್ಲೂ ಶಿಕ್ಷಣ ಕ್ಷೇತ್ರದಲ್ಲಿ ಇದರ ಪಾತ್ರವೇ ಮಹತ್ವವುಳ್ಳದ್ದು. ನಿಜವಾದ ಶಿಕ್ಷಣವು ವ್ಯಕ್ತಿತ್ವದಿಂದ ವಿಕಸಿತವ್ಯಕ್ತಿತ್ವದ ಕಡೆಗೆ ಸಾಗುತ್ತದೆ.

(ಮುಂದುವರಿಯುತ್ತದೆ.)

# ವಿಶ್ವದಲ್ಲಿ ಭಾರತೀಯ ಸಂಸ್ಕೃತಿ-6

❀ ಎಚ್. ಎಸ್. ನರಸಿಂಹಜೀಯರ್, ಲಕ್ಷ್ಮಯ್ಯ ಗಾರ್ಡನ್ಸ್, 14 ನೇ ಕ್ರಾಸ್,
ಸೋಮೇಶ್ವರಪುರಂ, ತುಮಕೂರು-2

ಇತಿಹಾಸ ಸಂಶೋಧನೆಯ ಪ್ರಸಿದ್ಧಿ ಪಡೆದಿರುವ ಶ್ರೀ ಪಿ.ಎನ್. ಓಕ್‌ರವರು ವಿಶ್ವದ ನಾನಾ ಕಡೆ ಸಂಚರಿಸಿ ಆಧಾರಗಳನ್ನು ಹುಡುಕಿ ಭಾರತೀಯ ಸಂಸ್ಕೃತಿ ವಿಶ್ವದಲ್ಲಿ ಹರಡಿದ್ದ ಬಗ್ಗೆ ಅನೇಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಅವರ ಒಂದು ಲೇಖನದಲ್ಲಿ ವಿಶ್ವದ ಅನೇಕ ದೇಶಗಳಲ್ಲಿ ಕ್ರಿ.ಪೂ.ದಲ್ಲಿಯೇ ಪರಮೇಶ್ವರನನ್ನು ಪಿತೃದೇವ (Father God) ನೆಂದು ಪೂಜಿಸುತ್ತಿದ್ದರೆಂದು ಹೇಳಿದ್ದಾರೆ. ಅವರ ಭಾಷೆಯಲ್ಲಿಯೇ ಹೇಳುವುದಾದರೆ "In the pre-christion era Siva was worshipped as Father God in all countries. "Kala" is one of the famous international siva Temple to which streams of devotees wended their way from all regions of our Globe from times immemorial. 'ಕಲಾ' ಎಂಬುದು ಅಂತರ್ರಾಷ್ಟ್ರೀಯ ಮಟ್ಟದಲ್ಲಿ ಪ್ರಖ್ಯಾತಿ ಪಡೆದ ಶಿವ ದೇವಾಲಯವೆಂದೂ ಅಲ್ಲಿಗೆ ವಿಶ್ವದ ಎಲ್ಲಾ ಭಾಗಗಳಿಂದಲೂ ಭಕ್ತರು ಅತ್ಯಂತ ಪುರಾತನ ಕಾಲದಿಂದಲೂ ಯಾತ್ರೆ ಬರುತ್ತಿದ್ದರೆಂದೂ ತಿಳಿಸಿದ್ದಾರೆ. ಮುಂದೆ ವಿವರಿಸುತ್ತಾ, ಜೆರೂಸಲೆಂನಲ್ಲಿರುವ ಕಲ್ಲಿನ ಗೋಪುರ ಮತ್ತೊಂದು ಅಂತರ್ರಾಷ್ಟ್ರೀಯಶಿವ ಮಂದಿರವೆಂದು ತಿಳಿಸಿ ಅಲ್ಲಿರುವ ಶಿಲೆಯೇ ಶಿವನ ಪ್ರತೀಕವಾಗಿ ಪೂಜಿಸಲ್ಪಡುತ್ತಿದ್ದ ಮೂರ್ತಿ ಎಂದಿದ್ದಾರೆ. ಹಿಂದಿನ ಪದ್ಧತಿಯಂತೆ ಈಗಲೂ ಭಕ್ತರು ಪ್ರದಕ್ಷಿಣೆ ಮಾಡುತ್ತಾರೆಂದು ತಿಳಿಸಿದ್ದಾರೆ.

ಆಫ್ರಿಕಾದೇಶದ ಟಾಂಜಾನಿಯದಲ್ಲಿಯೂ ಪೂರ್ವದಲ್ಲಿ ಅತಿದೊಡ್ಡ ಶಿವದೇವಾಲಯವಿತ್ತೆಂದು ಅದನ್ನೇ ಈಗ ದಾರ್-ಎ-ಸಲಾಮ್ ಎಂದು ಕರೆಯುತ್ತಿದ್ದಾರೆ ಎಂದು ಹೇಳಿದ್ದಾರೆ. ಇದರ ಸರಿಯಾದ ಹೆಸರು "ದ್ವಾರ ಈ ಶಾಲಯಂ" (Gate way temple of god) ಆದರೆ ಅರಾಬಿಕ್‌ನಲ್ಲಿ ಅಪಭ್ರಂಶವಾಗಿ ಹೆಸರು ಬದಲಾಗಿದೆ ಎಂದಿದ್ದಾರೆ. ಇತ್ತೀಚೆಗೆ ಅವೆಲ್ಲವೂ ಮತಾಂಧರಿಂದ ನಾಶವಾಗಿವೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಸಂಶೋಧಕರುಗಳು ಈ ಬಗ್ಗೆ ಹೆಚ್ಚಿನ ಸಂಶೋಧನೆ ನಡೆಸಿ ಸತ್ಯಾಂಶಗಳನ್ನು ಹೊರ ತರಬೇಕೆಂದೂ ಕೋರಿದ್ದಾರೆ.

ಯೂರೋಪ್ ಹಾಗೂ ಇತರೆ ಕೆಲವು ಪಾಶ್ಚಾತ್ಯ ದೇಶಗಳಲ್ಲಿ ಶಿವನನ್ನು ಪಿತೃದೇವನೆಂದು ಪೂಜಿಸುತ್ತಿದ್ದಲ್ಲದೆ, ಪಾರ್ವತಿದೇವಿಯನ್ನು ಮಾತೃ ದೇವತೆಯೆಂದು ಆರಾಧಿಸುತ್ತಿದ್ದ ಬಗ್ಗೆ ಮಾಹಿತಿ ಒದಗಿಸಿದ್ದಾರೆ. ಸಂಸ್ಕೃತದಲ್ಲಿ ಆಕೆಯ ಹೆಸರು ಮಾರಿಯಮ್ಮ



ಅಥವಾ "ಮಾರಿಯಾಂಬ" ಅಥವಾ "ಮಾರಿತಾಯಿ". ಈ ದೇವಿಯ ಆರಾಧನೆಯೂ ಕ್ರಿ.ಪೂ.ದಲ್ಲಿಯೇ ಪಾಶ್ಚಾತ್ಯ ದೇಶಗಳಲ್ಲಿತ್ತೆಂದು ತಿಳಿಸಿದ್ದಾರೆ. ಈ ದೇವತೆಯನ್ನು ಈಗಲೂ ದಕ್ಷಿಣ ಭಾರತದಲ್ಲಿ "ಮಾರಿಹಬ್ಬ" ಅಥವಾ "ಮಾರಿಜಾತ್ರೆ"ಯಾಗಿ ಆಚರಿಸುವ ಪದ್ಧತಿ ಇದೆ. ಅನೇಕ ಊರುಗಳಲ್ಲಿ 'ಮಾರಮ್ಮನ" ದೇವಾಲಯಗಳಿವೆ. ಫ್ರಾನ್ಸ್‌ದೇಶದ ಅನೇಕ ಕಡೆ ಈ ದೇವಿಯ ದೇವಾಲಯಗಳಿವೆ ಎಂದು ಹೇಳಿದ್ದಾರೆ. ತಾಯಿ ದೇವತೆಯ Mother Goddess ಅಥವಾ Notre Dame -meaning our Goddess) ದೊಡ್ಡ ದೇವಾಲಯ ಪ್ಯಾರಿಸ್‌ನಲ್ಲಿದೆ. ಅತ್ಯಂತ ಚಿಕ್ಕ ಪಟ್ಟಣಗಳಲ್ಲಿಯೂ ಈ ದೇವಾಲಯಗಳನ್ನು ಫ್ರಾನ್ಸ್ ದೇಶದಲ್ಲಿ ನೋಡಬಹುದಾಗಿದೆ ಎಂದಿದ್ದಾರೆ.

ಫ್ರಾನ್ಸ್ ದೇಶದ 'ಸ್ಯಾಬಲ್' ಎಂಬಲ್ಲಿ ಪ್ರಮುಖವಾದ ಹಳೆಯ ಕ್ಯಾಥೆಡ್ರಲ್ ಈಗ ಮುಚ್ಚಿದೆ. ಈ ದೇವಾಲಯದಲ್ಲಿ ಶಿವಲಿಂಗವನ್ನು ಕಿತ್ತು ಹಾಕಿದ ಬಗ್ಗೆ ಕುಳಿ (Pit) ಇದೆ. ಶ್ರೀ ಓಕ್‌ರವರ ಅಭಿಪ್ರಾಯದಂತೆ ಇದು ಹಿಂದೆ ಇದ್ದ ಶಿವದೇವಾಲಯ ಲಿಂಗವನ್ನು ಕಿತ್ತುಹಾಕಿದ್ದರಿಂದ ಕುಳಿಬಿದ್ದಿದೆ. ಊರಿನ ಹೆಸರು "ಶಿವಾಲಯ" ಅಪಭ್ರಂಶವಾಗಿ "ಸ್ಯಾಬಲ್" ಆಗಿದೆ ಎಂದು ವಿವರಣೆ ನೀಡಿದ್ದಾರೆ.

ಇಟಲಿ ದೇಶದಲ್ಲಿ ಪ್ರಾಕೃತಿಕ ಸಂಶೋಧನೆ ಕಾಲದಲ್ಲಿ ಅನೇಕ ಕಡೆ ಶಿವಲಿಂಗಗಳು ದೊರೆತಿವೆ. Encyclopaedia Britanica ಗ್ರಂಥದಲ್ಲಿ ಇವುಗಳನ್ನು ಉಲ್ಕಾಪಾತಕಾಲದಲ್ಲಿ ಬಿದ್ದ ಕಲ್ಲುಗಳೆಂದೂ, ಈ ಕಲ್ಲುಗಳನ್ನು ಕೆತ್ತನೆಯಿಂದ ಕೂಡಿದ ಪೀಠಗಳ ಮೇಲೆ ಸ್ಥಾಪಿಸಲಾಗಿದೆ ಎಂದು ತಪ್ಪು ಮಾಹಿತಿ ಕೊಟ್ಟಿದ್ದಾರೆ. ಈಗಲೂ ಇಟಲಿ ದೇಶದ ಪ್ರಮುಖನಗರಗಳಲ್ಲಿನ ಕೇಂದ್ರಸ್ಥಳಗಳಲ್ಲಿ ಸಾರ್ವಜನಿಕ ಚೌಕಮಗಳ ಮಧ್ಯೆ ತ್ರಿಶೂಲ ಧಾರಿ ಶಿವನ ಮೂರ್ತಿಗಳನ್ನು ಸ್ಥಾಪಿಸಿರುವುದು, ಶಿವನ ಕೊರಳಿನ ಸುತ್ತ ಸರ್ಪಗಳು ಸುತ್ತಿರುವಂತೆ ಕೆತ್ತಿರುವುದೂ ಅವರ ಹಿಂದಿನ ಭಾರತೀಯ ಸಂಸ್ಕೃತಿಯ ಪ್ರತೀಕವೆಂದು ಹೇಳಬಹುದು ಎಂಬುದು ಶ್ರೀ ಓಕ್‌ರವರ ಖಚಿತ ಅಭಿಪ್ರಾಯ.

ಯೂರೋಪ್ ದೇಶದಲ್ಲಿ ಉಪಯೋಗಿಸುತ್ತಿರುವ ಐಕಾನ್ (Icon) ಪದವು ಸಂಸ್ಕೃತದ ಈಶನ್(Ishan) ಪದದ ಅಪಭ್ರಂಶ. ಇದುಶಿವನನ್ನು ಸೂಚಿಸುತ್ತದೆ ಎಂದಿದ್ದಾರೆ. ಗ್ರೀಕ್ ಮತ್ತು ರೋಂ ದೇಶಗಳಲ್ಲಿ ಶಿವನನ್ನು ತ್ರ್ಯಂಬಕೇಶನೆಂದು ಪೂಜಿಸುತ್ತಿದ್ದರೆಂದು ಹೇಳಿದ್ದಾರೆ. ಯುದ್ಧಗಳಲ್ಲಿ ಗೆದ್ದಾಗ ತ್ರ್ಯಂಬಕೇಶ್-ತ್ರ್ಯಂಬಕೇಶ್ ಎಂದು ಮೆರವಣಿಗೆ ಮಾಡುತ್ತಿದ್ದರೆಂದು ಈ ಪದದಿಂದಲೇ "Triumph" ಪದ ಉತ್ಪತ್ತಿಯಾಗಿದೆ ಎಂದು ಅವರ ಅಭಿಪ್ರಾಯ.

"ಇಸ್ಲಾಂ" - ಅರಬ್ ರಾಷ್ಟ್ರೀಯ ಆಂದೋಳನ (Islam-The Arab National movement) ಈ ಗ್ರಂಥದ ಕರ್ತೃ ಶ್ರೀ ಅನ್ವರ್ ಶೇಖ್ ಎಂಬುವರು. ಈ ಗ್ರಂಥದ ಪರಿಚಯ ಮಾಡುತ್ತಾ ಅಸೀಮಾ ಮಾಸಪತ್ರಿಕೆಯಲ್ಲಿ ಮುಸ್ಲಿಮರ ಪವಿತ್ರ ಕ್ಷೇತ್ರವಾದ ಮೆಕ್ಕಾದಲ್ಲಿರುವ "ಕಾಬಾ"ದ ಬಗ್ಗೆ ಈ ರೀತಿ ಬರೆದಿದ್ದಾರೆ. "ಕಾಬಾದಲ್ಲಿ ಮೂರ್ತಿ ಪೂಜೆ ಇತ್ತು. ಅದೊಂದು ಹಿಂದು ದೇವಸ್ಥಾನದಂತೆ ಇತ್ತು. ತ್ರಿಮೂರ್ತಿ ಕಲ್ಪನೆಯಂತೆ ಅಲ್ಲಿ ಮೂರು ವಿಗ್ರಹಗಳಿದ್ದವು. ಅಲ್ಲಾನ ಹೆಣ್ಣು ಮಕ್ಕಳೆಂದು ಹೇಳಿ ಅಲ್ಲಿ ಪೂಜೆ ನಡೆಸಲಾಗುತ್ತಿತ್ತು. ಕುರೇಶಿ ಆಡಳಿತದಲ್ಲಿದ್ದ ಈ ದೇವಸ್ಥಾನವನ್ನು ಅಲ್ಲಾನ ಪವಿತ್ರಸ್ಥಾನ ಮಾಡುವುದರಿಂದ ಕುರೇಶಿಗಳಿಗೆ ಲಾಭ ಮಾಡುವುದು ಮಹಮ್ಮದ್ ಪೈಗಂಬರರ ಮೊದಲ ಗುರಿಯಾಗಿತ್ತು. ಏಕೆಂದರೆ ಮಹಮ್ಮದರು ಕುರೇಶಿ ವಂಶಜರು. ಕಾಬಾಕ್ಕೆ ಭೇಟಿ ನೀಡುವ ಎಲ್ಲಾ ಆದಿವಾಸಿ ಅರಬ್ಬರನ್ನು ಅಲ್ಲಿನ ಅತಿಥಿಗಳೆಂದು ಅವರು ಕರೆದರು. ಆದರೂ ಇತರರ ವಿಗ್ರಹಗಳೊಂದಿಗೆ ಅಲ್ಲಿನ ಪೂಜೆ ಅವರಿಗೆ ಸಹನೀಯವಾಗಲಿಲ್ಲ. ಅದಕ್ಕಾಗಿ ಅವರು ಕ್ರಿ.ಶ. 630 ರಲ್ಲಿ ಅಲ್ಲಾ ಮಾತ್ರ ಅಲ್ಲಿರಬೇಕೆಂದು ಆದೇಶಿಸಿ ಇತರ ವಿಗ್ರಹಗಳನ್ನು ಕಿತ್ತು ಹಾಕಿದರು. ಅಂತೆಯೇ ತನ್ನ ವಂಶಜರಾದ ಕುರೇಶಿಗಳು ಮಾತ್ರ ಆಡಳಿತದ ಹಕ್ಕು ಹೊಂದಿರುವುದಾಗಿ ದೇವರ ಆದೇಶವನ್ನು ತಿಳಿಸಿದರು. ಇಂದಿಗೂ ಈ ಪರಂಪರೆ ಮುಂದುವರೆದಿದೆ. ಶ್ರೀ ಅನ್ವರ್ ಶೇಖ್ ಬರೆದಿರುವ ಈ "ಇಸ್ಲಾಂ" ಗ್ರಂಥದಿಂದ ಮೆಕ್ಕಾದಲ್ಲಿರುವ ಕಾಬಾದಲ್ಲಿ ಹಿಂದೆ ತ್ರಿಮೂರ್ತಿಗಳ ಪೂಜೆ ನಡೆಯುತ್ತಿತ್ತೆಂದೂ ಭಾರತೀಯ ಪರಂಪರೆಯ ಜನ ಅಲ್ಲಿ ವಾಸಿಸುತ್ತಿದ್ದರೆಂದು ತಿಳಿದು ಬಂದಿದೆ.

"Vision of India" ಗ್ರಂಥದಲ್ಲಿ ಈ ರೀತಿ ಹೇಳಿದ್ದಾರೆ. "Before the rise of Islam, there lived in Arabia many Hindus mostly Brahmins, who settled there observing the Hindu-religious customs including the worship of Siva as "Makkesha" from which the name of Mecca is said to have been derived. The famous Austronomer Yavanacharya was born of one such Brahmin family. It was from these Brahmins that the Arabs learnt the science of Mathematics, Astronomy, Algebra and Decimal notation, which as we have already said, were first developed in India".................................5 ಅಂದರೆ, ಅರೇಬಿಯಾ ದೇಶದಲ್ಲಿ ಇಸ್ಲಾಂ ಧರ್ಮವು ಪ್ರಾರಂಭವಾಗುವುದಕ್ಕೆ



ಮುಂಚೆಯೇ ಅನೇಕ ಹಿಂದೂಗಳು ಹೆಚ್ಚಾಗಿ ಬ್ರಾಹ್ಮಣರು ತಮ್ಮ ಧರ್ಮಕ್ಕನುಸಾರವಾಗಿ ಧರ್ಮಾಚರಣೆ ಮಾಡುತ್ತಾ ಶಿವನನ್ನು "ಮಕ್ಕೇಶ" ನೆಂದು ಪೂಜಿಸುತ್ತಾ ವಾಸವಾಗಿದ್ದರು. ಆದ್ದರಿಂದ ಈ ಸ್ಥಳಕ್ಕೆ "ಮೆಕ್ಕಾ" ಎಂದು ಹೆಸರು ಬಂದಿದೆ ಎಂದು ತಿಳಿದು ಬಂದಿದೆ- ಇಂತಹ ಒಂದು ಬ್ರಾಹ್ಮಣ ಕುಟುಂಬದಲ್ಲಿ ಪ್ರಸಿದ್ಧ ಖಗೋಳ ಶಾಸ್ತ್ರಜ್ಞರಾದ "ಯವನಾಚಾರ್ಯ"ರು ಜನಿಸಿದ್ದರು. ಈ ಬ್ರಾಹ್ಮಣರಿಂದಲೇ ಅರಬ್ಬರು ಭಾರತೀಯ ಮೂಲದ ಗಣಿತ ಶಾಸ್ತ್ರ, ಖಗೋಳಶಾಸ್ತ್ರ, ಬೀಜಗಣಿತ ಮತ್ತು ದಶಮಾನ ಪದ್ಧತಿಯನ್ನು ಕಲಿತರು ಎಂದು ತಿಳಿಸಿದ್ದಾರೆ.

ಈ ಮೇಲಿನ ಎರಡು ಗ್ರಂಥಗಳಲ್ಲದೆ ಇನ್ನೂ ಈ ಬಗ್ಗೆ ಅನೇಕ ಆಧಾರಗಳಿವೆ ಎಂದು ತಿಳಿದು ಬಂದಿದೆ. ಪ್ರಮುಖವಾಗಿ ವಿಶ್ವದ ಇಸ್ಲಾಂ ಧರ್ಮೀಯರಿಗೆ ಪವಿತ್ರ ಕ್ಷೇತ್ರವಾಗಿರುವ ಮೆಕ್ಕಾದಲ್ಲಿಯೂ ಭಾರತೀಯ ಪರಂಪರೆ ಇತ್ತು. ಇದನ್ನು ತಮ್ಮ ಕ್ಷೇತ್ರವನ್ನಾಗಿ ಮಹಮ್ಮದ್ ಪೈಗಂಬರರು ಆರಿಸಿಕೊಂಡ ಮೇಲೆ ಅಲ್ಲಿದ್ದ ಮೂರ್ತಿಗಳು ಹಾಗೂ ನಮ್ಮ ಸಂಸ್ಕೃತಿಯು ನಾಶವಾಯಿತೆಂದು ಅರಿಯಬಹುದಾಗಿದೆ ●

---

## 'ಕ್ಯಾನ್ಸರ್' - ಮುಕ್ತವಾಗಲು ಕೆಲವು ಕ್ರಮಗಳು

*ಎಚ್. ಗವಿಸಿದ್ದಯ್ಯ, ಶಿಕ್ಷಕರು, ಗ್ರಾ.ಪ್ರೌಢಶಾಲೆ, ಆವತಿ.ದೇವನಹಳ್ಳಿ ತಾ, ಬೆಂ ಜಿಲ್ಲೆ.

ರೋಗರುಜಿನಗಳಿಲ್ಲದೆ ಆರೋಗ್ಯವಾಗಿರಲು ನಾವು ಪ್ರತಿ-ನಿತ್ಯ ಹಸಿರು ತರಕಾರಿಗಳನ್ನು ಸೇವಿಸಬೇಕು.

"ಕ್ಯಾನ್ಸರ್" ಎನ್ನುವ ಭಯಂಕರ ರೋಗವನ್ನು ಸಹ ನಾವು ಹಸಿರು ತರಕಾರಿಗಳನ್ನು ಸತತವಾಗಿ ಸೇವಿಸುವುದರಿಂದ ದೂರವಿಡಬಹುದು.

ಕತ್ತರಿಯಂತಿರುವ ನಾಲ್ಕು ದಳಗಳ ತರಕಾರಿಗಳಾದ ಹೂಕೋಸು, ಎಲೆಕೋಸು ಮುಂತಾದವುಗಳ ಸೇವನೆಯಿಂದ ಅನೇಕ ರೀತಿಯ ಕ್ಯಾನ್ಸರ್‌ಗಳಿಂದ ಮುಕ್ತರಾಗಬುಹುದು.

ನಾರುಯುಕ್ತವಾದ ತರಕಾರಿ, ಬೇಳೆ, ಹಣ್ಣು ಸೇಬು, ಟೊಮ್ಯಾಟೊ ಮುಂತಾದವುಗಳ ಸೇವನೆಯಿಂದ 'ಕೋಲನ್ ಕ್ಯಾನ್ಸರ್' ಎನ್ನುವ ರೋಗವನ್ನು ತಡೆಗಟ್ಟಬಹುದು ಅಥವಾ ಗುಣಪಡಿಸಬಹುದು.

ಅನ್ನಾಂಗ 'ಎ' ಇರುವ 'ಮೀನು' ಹಸಿರು ಮತ್ತು ಹಳದಿ ಬಣ್ಣದ ತರಕಾರಿ ಮುಂತಾದವುಗಳ ಸೇವನೆಯಿಂದ ಶ್ವಾಸಕೋಶ ಮತ್ತು ಉದರ ಕ್ಯಾನ್ಸರನ್ನು ಗುಣಪಡಿಸಬವುದು.

ಇನ್ನು ಅನ್ನಾಂಗ 'ಸಿ' ಹೊಂದಿರುವ ಕಿತ್ತಳೆ, ನಿಂಬೆ, ಮೊಳಕೆಕಾಳುಗಳು ಮುಂತಾದವುಗಳ ಸೇವನೆಯಿಂದ ಹೊಟ್ಟೆಯ ಕಾನ್ಸರ್‌ನಿಂದ ಮುಕ್ತರಾಗಬಹುದು.

# ಹೊರೆಯಾಗುತ್ತಿರುವ ಪಠ್ಯಪುಸ್ತಗಳು ಅಥವಾ ವಿದ್ಯಾರ್ಥಿಗಳು ಮನೆಯಾಳೋ ಹೊರೆಯಾಳೋ?

*ಆರ್. ಜಿ. ಶಾನಭಾಗ, ಶರಾವತಿ ಪ್ರೌಢಶಾಲೆ, ಹೊಸಾಡ, ಹೊನ್ನಾವರ (ಉ.ಕ.)

ಕೇಂದ್ರ ಸರ್ಕಾರ ನೀತಿ ನಿರೂಪಣಾ ದಾಖಲೆಯನ್ನು ಮಂಡಿಸಿ ಶಿಕ್ಷಣ ತಜ್ಞರು ಮಾಡಿದ ವಿಮರ್ಶಾ ಬೆಳಕಿನಲ್ಲಿ ಹೊಸ ಶಿಕ್ಷಣ ನೀತಿಯನ್ನು ರೂಪಿಸಿ ಜಾರಿಯಲ್ಲಿ ತಂದಿದೆ. ಅದು ತಂದಂಥ ಸುಧಾರಣೆಗಳೆಲ್ಲ ಹೊಸ ಬಾಟಲಿಯಲ್ಲಿ ಇದ್ದಂಥ ಹಳೆ ಸಾರಾಯಿಯೇ ಆಗಿದೆ. ಕಂಡರಸಿರುವ ಮಾರ್ಗೋಪಾಯಗಳು ಶಿಕ್ಷಣ ಸುಧಾರಣೆಗಳೆಲ್ಲವನ್ನು ಕವಲು ದಾರಿಯತ್ತ ತಂದು ನಿಲ್ಲಿಸಿದೆ. ಅಧ್ಯಾಪನ, ಅಧ್ಯಯನ ಎರಡು ಪ್ರಕ್ರಿಯೆ ಇಡಿ ಶಿಕ್ಷಣ ವ್ಯವಸ್ಥೆಗೆ ಸವಾಲಾಗಿ ಪರಿಣಮಿಸಿದೆ. ನೀಡಬಹುದಾದ ಉದಾಹರಣೆ ಎಂದರೆ ಆಗುತ್ತಿರುವ ಪಠ್ಯಪುಸ್ತಕಗಳು.

ವಿದ್ಯಾರ್ಥಿಗಳು ಕನಿಷ್ಠ ದಿನಕ್ಕೆ 9ಕೆ.ಜಿ. ತೂಕದ ಪಠ್ಯಪುಸ್ತಕ ಹಾಗೂ ಟಿಪ್ಪಣಿ ಪುಸ್ತಕ ಒಯ್ಯಬೇಕಾಗುತ್ತದೆ ಎಂದು ಶಿಕ್ಷಣತಜ್ಞರು ಅಭಿಪ್ರಾಯ ಇತ್ತಿದ್ದಾರೆ. ದೆಹಲಿಯ ಶಿಕ್ಷಣ ಅಭಿಮಾನಿ ಒಬ್ಬನು ಈ ಆಕ್ಷೇಪಣೆ ಹಿಂದೆಯೇ ರಿಟ್ ಅರ್ಜಿಯನ್ನು ಸುಪ್ರೀಂ ಕೊರ್ಟ್ ನಲ್ಲಿ ಸಲ್ಲಿಸಿದ್ದರಿಂದ ಕೋರ್ಟು ತೀರ್ಪಾಗಿ ಹೊರೆಯನ್ನು ಇಳಿಸಲು ಕೇಂದ್ರ ಸರ್ಕಾರಕ್ಕೆಆದೇಶಿಸಿತು. ಕೇಂದ್ರ ಪ್ರೊ. ಯಶಪಾಲ ಸಮಿತಿಯನ್ನು ಅಧ್ಯಯನಕ್ಕೆ ನೇಮಿಸಿ ಶಿಕ್ಷಣ ಇಲಾಖೆಗೆ ಮಾರ್ಗದರ್ಶನ ಸೂತ್ರ ನೀಡಿದೆ. ಪಠ್ಯ ಪುಸ್ತಕದ ಹೊರೆ ಹೇಗಿಳಿಸುವುದೆನ್ನುವುದೇ ಈಗ ಸರ್ಕಾರಕ್ಕೆ ಹೊರೆಯಾಗಿದೆ.

ಸಮವಸ್ತ್ರದ ಕಡ್ಡಾಯ, ಧಾರಣೆ, ಟಿಫಿನ್ ಬಾಕ್ಸ್ ಮತ್ತು ನೀರಬಾಟಲಿ ಅದರೊಟ್ಟಿಗೆ ಪಠ್ಯಪುಸ್ತಕ ಹೊರಬೇಕಾಗಿರುವುದರಿಂದ ವಿದ್ಯಾರ್ಥಿಗಳ ಬಾಳು ಏನೆಲ್ಲದಿದ್ದರೂ ಹೇಸರಗತ್ತೆಯಂತಾಗುತ್ತದೆ. ಕಲಿಯದ ಮುಗ್ಧ ಮಕ್ಕಳು ಇದಕ್ಕೆ ಪ್ರತಿಕ್ರಿಯಿಸಲಾಗದೆ ಮುಗ್ದರಾಗಿದ್ದಾರೆ. ಶಾಲಾವಧಿಯ ನಂತರ ಮನೆಗೆ ಬಂದಾಗ ಮನೆಪಾಠದ ಮನೆಗೆಲಸಕ್ಕೆ ಅವರು ಅಂಟಿರುತ್ತಾರೆ.

ಹೇರಿಕೆಯಿಂದಾಗಿ ಶಾಲೆಗಳು ಅನಾಕರ್ಷಕ, ಶಿಕ್ಷಣವು ಶಿಕ್ಷೆ. ಹೀಗಾಗಿ ಶಿಕ್ಷಣಾಲಯವು ಹಿಂಸಾಲಯವಾಗಿದೆ. ಶಿಕ್ಷಣ ಗಿಳಿಪಾಠ, ಶುಷ್ಕವೂ ಹೌದು. ಸೃಜನಶೀಲತೆಯಿಂದ ವಂಚಿತವಾಗಲು ಇದೊಂದು ಕಾರಣ. ಹೇಳಬೇಕೆಂದರೆ'ಶಿಕ್ಷಕರಂತೂ ಯಥಾವಾದಿಗಳು ಹಾಗೂ ಸಂಪ್ರದಾಯವಾದಿಗಳು. ಸುಧಾರಣಾವಾದಿಗಳಲ್ಲ. ಬದಲಾವಣೆ ಬೇಕೆನ್ನುವವರಾದರೂ ಸುಧಾರಣೆಗೆ ಸಿದ್ಧಮನಸ್ಕರಲ್ಲ. ಬೋಧನೆ ಯಾಂತ್ರಿಕವಾಗಿದೆ. ಕಲಿಕೆಯನ್ನು ಸಹ ಅದೇ ಜಾಡಿಗೆ ಓಯ್ಯುತ್ತಾರೆ. ವಿದ್ಯಾರ್ಥಿಗಳು ಬೆಳೆಯುವ ಬೆಳೆ



ಯಾಗದೆ ಕಳೆಯುವ ಕಳೆ ವಿದ್ಯಾರ್ಥಿಗಳನ್ನು ಶಾಲೆ ತಮ್ಮತ್ತ ಆಕರ್ಷಿಸಿಕೊಳ್ಳಲು ಆಗುವಂತೆ ಪಠ್ಯ ಪುಸ್ತಕದಲ್ಲಿನ ವಿಷಯವನ್ನು ಕಿರಿಗೊಳಿಸಬೇಕು. ಪಠ್ಯೇತರ ಚಟುವಟಿಕೆ ಆಟದ ಮೂಲಕ ಕಲಿಕೆಗೆ ಅವಕಾಶ ದೊರಕಿಸಿದರೆ ಕಲಿಕೆ ರಂಜನೀಯವಾಗುವುದು. ಸೃಜನಶೀಲ ಚಟುವಟಿಕೆಗೆ ಶಿಕ್ಷಕರು ಅವಕಾಶವಾದಿಯಾಗಲು ಸಾಧ್ಯ. ಜ್ಞಾನದ ಹೊರೆ ಪಠ್ಯಪಸ್ತಕದ ಮೇಲೇರಿಸುವುದಲ್ಲ. ಪಠ್ಯಪುಸ್ತಕದ ಹೊರೆ ಮಕ್ಕಳ ಮೇಲೆಯೇ ಏರಿಸಬಾರದು.

ಶಾಲೆಗೆ ಹೋಗುವಾಗ ಪುಸ್ತಕಗಳಿಲ್ಲ ಮನೆಯಲ್ಲಿ ಮನೆಪಾಠವಿಲ್ಲ. ಎಂಬಘೋಷಣೆ ಮೊಳಗಿದೆ. ಇನು ಚರ್ಚಾಸ್ಪದ. ಸಾಮಾನ್ಯರಿಗೆ ಇದು ಹಾಸ್ಯಾಸ್ಪದವಾಗಿಯೂ ತೋರ್ಪಡಿಸಬಹುದು.

ಕಲಿಕೆ ಬೋಧನೆ ಎರಡು ಪ್ರಕ್ರಿಯೆ ಆನಂದವಾಗಿರಿಸುವ ಜೊತೆ ಅದನ್ನು ಹಗುರಾಗಿಸಬೇಕಾಗಿದೆ. ಇದರಿಂದ ಶಿಕ್ಷಣದ ಧ್ಯೇಯಧೋರಣೆಗಳು ಸಾಫಲ್ಯದತ್ತ ಸಾಗುವುವು; ಇದಕ್ಕೊಂದೇ ಮಾರ್ಗ ಪಠ್ಯಪುಸ್ತಕಗಳ ಭಾರ ಇಳಿಸುವುದಾಗಿದೆ.

ಪಠ್ಯಪುಸ್ತಕಗಳ ಹೊರೆ ಇಳಿಸುವುದೆಂದರೆ ತರಗತಿಯಿಂದ ಅವನ್ನು ಮಂಗಮಾಯ ಮಾಡುವದಲ್ಲ. ಮತ್ತೆ ಮತ್ತೆ ಓದಿ ಶಾಲೆಯಲ್ಲಿ ಕಲಿತಿದ್ದನ್ನು ಮತ್ತಿಷ್ಟು ಗಟ್ಟಿಗೊಳಿಸಲು ಪುಸ್ತಕಗಳು ಬೇಕೇ ಬೇಕು. ಶಿಕ್ಷಕರು ಟಿಪ್ಪಣಿಯಾಗಿ ನೀಡಿದ್ದಲ್ಲಿ ಪರಿಪೂರ್ಣ ಪಠ್ಯವಿಷಯ ಇರುವುದು ಸಾಧ್ಯವಿಲ್ಲ. ಟಿಪ್ಪಣಿಯಲ್ಲಿ ಕೈಬಿಟ್ಟಿರುವ ಪಠ್ಯ ವಿಷಯ ಪುಸ್ತಕದಲ್ಲಿರುವುದು. ಶಿಕ್ಷಕರು ನೀಡಿದ ಟಿಪ್ಪಣಿ ಹಾಗೂ ಪಠ್ಯಪುಸ್ತಕಗಳು ಒಂದು ಇನ್ನೊಂದಕ್ಕೆ ಪೂರಕ.

ಮಕ್ಕಳು ಹೆಚ್ಚಿನ ಅಂಕಗಳಿಸಬೇಕು. ಉತ್ತಮ ರ್‍ಯಾಂಕ್ ಪಡೆಯಬೇಕೆಂಬ ಪಾಲಕರ ಉತ್ಕಟಾಭಿಲಾಷೆ. ಮನೆಪಠ್ಯದ ಕೆಲಸ ಹಾಗೂ ಪಠ್ಯಪುಸ್ತಕಗಳ ಹೊರೆ ಹೆಚ್ಚಾಗಿಸಿದೆ ಎಂದು ತಜ್ಞರು ಆರೋಪಿಸಿದ್ದಾರೆ.

ಶಾಲೆಯಲ್ಲಿ ಕಲಿತ ಅರಿವನ್ನು ಗಟ್ಟಿಗೊಳಿಸಲು ಮನೆಗೆಲಸ ಮಾಡಿ, ಪುಸ್ತಕಗಳನ್ನು ಅಧ್ಯಯನ ಮಾಡಿ ಸಾಧಿಸಬೇಕು. ಅರಿವನ್ನು ಸ್ವತಃ ಗಳಿಸಲು ಪಠ್ಯಪುಸ್ತಕ ಅಧ್ಯಯನ ಅನಿವಾರ್ಯ. ತರಗತಿಯಲ್ಲಿ ಮುಂದಿನ ಅಧ್ಯಯನಕ್ಕೆ ಪೂರ್ವಭಾವಿಸಿದ್ಧತೆಗೆ ಪುಸ್ತಕದ ವಿನಃ ಸಾಧ್ಯವಿಲ್ಲ. ವಿಷಯ ವಿವರಣಾತ್ಮಕ ಕಲಿಕೆಗೆ ಪಠ್ಯಪುಸ್ತಕಗಳ ಸಹಾಯ ಹಸ್ತ ಬೇಕಿದೆ. ಪರಿಸರಾಧಾರಿತ ಬೋಧನೆ ತಂದು ತರಗತಿಯಿಂದ ಪುಸ್ತಕಗಳನ್ನು ಗಡಿಪಾರು ಮಾಡುವ ಪ್ರಯತ್ನದಲ್ಲಿ ತಜ್ಞರು ನಿರತರಾಗಿದ್ದಾರೆ.

ಪುಸ್ತಕ ಆಧಾರಿತ ಬೋಧನೆಯ ಬದಲು ವಿಷಯ ಆಧಾರಿತ ಬೋಧನೆ ಟಿಪ್ಪಣಿಗಳನ್ನು ನೀಡಿದರೆ ಪಠ್ಯವಿಷಯ ಕಿರಿದಾಗಿಸಲು ಸಾಧ್ಯವಿದೆ.

ಪುಸ್ತಕ ಹೊರೆ ಇಳಿಸಲು ಅದನ್ನು ಪರಿಷ್ಕೃತಗೊಳಿಸಬೇಕು. ಅನಗತ್ಯ ಹಾಗೂ ಅನವಶ್ಯಕ ವಿಷಯಗಳಿಗೆ ಕತ್ತರಿ ಹಾಕಿದರೆ ಪಠ್ಯಪುಸ್ತಕದ ಗಾತ್ರ ಮೂರನೆ ಎರಡು ಭಾಗಕ್ಕೆ ಇಳಿಸಬಹುದು ಭಾರ ಇಳಿಸುವುದೆಂದರೆ ಪುಸ್ತಕದಲ್ಲಿನ ಮಧ್ಯ ಮಧ್ಯದ ಅಧ್ಯಾಯವನ್ನು ಬಿಡುವುದೆಂದಲ್ಲ. ಅಧ್ಯಾಯಗಳನ್ನು ಹಾಗೆ ಇರಿಸಿ ಬೇಕಾಗಿರುವ ಅಂಶಗಳನ್ನು ತುಂಡರಿಸಬೇಕು. ಅಧ್ಯಾಯಗಳೆಲ್ಲ ಪರಸ್ಪರ ಸಂಬಂಧ ಇದ್ದವು. ಅವುಗಳ ಸಂಬಂಧ ಅವಿನಾಭಾವ.

ಅನುಭವಿಕ ಶಿಕ್ಷಕರನ್ನು ಪಠ್ಯ ಪುಸ್ತಕ ನಿರ್ಮಾಣಕ್ಕೆ ಬಳಸಬೇಕು. ಭಾಷೇತರ ವಿಷಯಗಳಲ್ಲಿ ಸಾಹಿತ್ಯ ಶಬ್ದವನ್ನು ಕಡಿಮೆಗೊಳಿಸಿ ವಿಷಯಕ್ಕಷ್ಟೇ ಒತ್ತನ್ನು ನೀಡಬೇಕು. ಒಂದೊಂದೇ ಟಿಪ್ಪಣಿ ಪುಸ್ತಕ ಬೇಡ. ಎಲ್ಲ ವಿಷಯಗಳಿಗೆ ಸೇರಿ ಒಂದೇ ಟಿಪ್ಪಣಿ ಪುಸ್ತಕ ಇರಿಸಿದರೆ ನೋಟ್ ಪುಸ್ತಕಗಳ ಹೊರೆ ಕಡಿಮೆ ಆಗುವುದು

ದಿನವೂ ಪಠ್ಯ ಪುಸ್ತಕ ನೋಟ್ ಪುಸ್ತಕ ಶಾಲೆಗೆ ತರಿಸದಂತೆ ಮಾಡಲು ಶಿಕ್ಷಕರು ವೇಳಾಪಟ್ಟಿ ತಯಾರಿಸಿದರೆ ಒಳಿತು. ಹೊಸ ಪಾಠ ಆರಂಭಿಸುವ ಮುನ್ನಾ ದಿನ ಪಠ್ಯಪುಸ್ತಕ ತರುವಂತೆ ಮಾಡಬಹುದು. ವಿದ್ಯಾರ್ಥಿಗಳು ಪಠ್ಯಪುಸ್ತಕ ನೋಡೇ ಕಲಿಯಬೇಕಾಗುವುದು.

ಭಾಷಾ ವಿಷಯದಲ್ಲಿ ಪಾಠ ಸಂಖ್ಯೆ ಕಡಿಮೆ ಮಾಡುವುದರಿಂದ ಪುಸ್ತಕದ ಗಾತ್ರ ಸಣ್ಣದಾಗಿಸಬಹುದು. ಪುಸ್ತಕದಲ್ಲಿರುವ ವಿಷಯ ಪ್ರಶ್ನೆಗಳೆಲ್ಲ ವೇದಾಂತ ಅನ್ನುವುದು ನಮ್ಮ ಶಿಕ್ಷಕರಿಗೆ ಅಂಟದ ಅನಿಸಿಕೆ. ಅವನ್ನೇ ಪರೀಕ್ಷೆಗೆ ಕೇಳಲಾಗುವ ಪ್ರಶ್ನೆ ಎನ್ನುವುದು ವಿದ್ಯಾರ್ಥಿಗಳ ಊಹೆ. ಅದು ತಪ್ಪಿಸಬೇಕು. ಪ್ರಶ್ನೆಪತ್ರಿಕೆಗಳನ್ನು ಹಾಗೆ ರೂಪಿಸಿದರೆ ಪಠ್ಯ ಪುಸ್ತಕ ಆಧಾರಿತ ಪ್ರಶ್ನೆಗಳ ಮೇಲೆ ವಿದ್ಯಾರ್ಥಿಗಳಿಗೆ ಒಲವಿರಲಾರದು.

ಪಠ್ಯಪುಸ್ತಕ ಆಧಾರಿತ ಪ್ರಶ್ನೆ ಕೇಳುವ ಬದಲು ಪರಿಕಲ್ಪನಾ ಆಧಾರಿತ ಪ್ರಶ್ನೆ ಕೇಳಬೇಕು. ಮನೆಗೆಲಸಕ್ಕಾಗಿ ಚಿಕ್ಕ ಚಿಕ್ಕ ಪ್ರಶ್ನೆ ನೀಡಬೇಕು. ಇದರಿಂದ ಪಠ್ಯಪುಸ್ತಕಗಳ ಹೊರೆ ಇಳಿಯುವುದರ ಸಂಗಡ ಶಿಕ್ಷಣದಲ್ಲಿ ಗುಣಾತ್ಮಕ ಬದಲಾವಣೆ ಆಗುವುದು. ಕಲಿಕೆ ಹಗುರೆನಿಸುವುದು ಬೋಧನೆ ಇನ್ನು ಹಗುರಾಗುವುದು. ಪಠ್ಯ ಪುಸ್ತಕಗಳ ಭಾರ ಇಳಿಸುವ ಸರಕಾರದ ನಿರ್ಧಾರ ಸ್ವಾಗತಾರ್ಹ.



# ನೆಮ್ಮದಿ ಕಾಣದ ಬದುಕು

● ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಅಂಚೆ-ಮುಚ್ಚಿನ-574295 ದ. ಕ

ನಾವು ಇಂದು ಯಾವುದನ್ನು ನಾಗರಿಕತೆ ಅಂದುಕೊಳ್ಳುತ್ತಾ ಇದ್ದೇವೋ ಅದು ಅನಾಗರಿಕತೆಯ ಪರಮಾವಧಿ ಎನ್ನುತ್ತದೆ ಒಂದು ನಾಣ್ಣುಡಿ. ಯಾಂತ್ರಿಕ ಯುಗದಲ್ಲಿ ಮಾನವಿಕ ಅನುಭೂತಿಯೇ ಮಾಯವಾಗುತ್ತಿರುವುದು ಒಂದು ಸೋಜಿಗ. ಮುಖಾಬಲಾದ ಹಾಡಿಗೆ ಪುಟ್ಟ ಹೆಣ್ಣುಮಗು ಮೈಯ ಏರನ್ನು ಕುಣಿಸುತ್ತಾ ಡಿಸ್ಕೋ ನೃತ್ಯ ಮಾಡಹತ್ತಿದರೆ ತಾಯಿ ತಂದೆಗೆ ಸ್ವರ್ಗಕ್ಕೆ ಮೂರೇ ಗೇಣು ಉಳಿಯುತ್ತದೆ. ಟಿ.ವಿ. ಪ್ರಪಂಚದಲ್ಲಿ ಮುಳುಗಿ ಅದರ ಮುಂದೆಯೇ ಬಟ್ಟಲನ್ನಿರಿಸಿಕೊಂಡು ಉಣ್ಣಲಾರಂಭಿಸುವ ಮನೆಯವರಿಗೆ ಕೆಲವೊಮ್ಮೆ ತುತ್ತು ಬಾಯಿಗಿಡುವುದೇ ಮರೆತಿರುತ್ತದೆ.

ನಮ್ಮ ದೇಶದ ಸಂಸ್ಕೃತಿ ಎಂದು ಹುಟ್ಟಿತೋ ಅದರ ಲೆಕ್ಕವೇ ಗೊತ್ತಿಲ್ಲ ಅಂತೂ ಅದಕ್ಕೆ ಅಳಿವು ಇಲ್ಲ ಎನ್ನುವುದು ನಿಶ್ಚಿತ. ಇದು ನಮಗೆ ಹಲವು ವಿಧದಿಂದ ಪಾಠವನ್ನು ಕಲಿಸುತ್ತಿದೆ. ಹೊತ್ತು ಮೂಡುವ ಮುನ್ನ ದೇವರನಾಮ ಪಠಿಸುತ್ತಾ ಎದ್ದು, ಮಂಗಳಸ್ನಾನ ಮಾಡಿ ಬಂದು, ದೇವರ ಮುಂದಿನ ನಂದಾದೀಪಕ್ಕೆ ತುಪ್ಪ ಎರೆದು, ಮನೆ ಮುಂದೆ ಸಾರಿಸಿ ರಂಗೋಲಿ ಇಡುವ ಹೆಣ್ಣು ಮಗಳಿಗೆ ಮನೆಯ ಲಕ್ಷ್ಮಿ ಎನ್ನುವ ಆದರ್ಶ ಭಾವನೆ ಇತ್ತು. ಇಂತಹ ಸನ್ನಡತೆಗೆ ಮೆಚ್ಚಿಯೋ ಏನೋ ದೇವರ ಕೃಪೆಯಿಂದ ಹಟ್ಟಿ ತುಂಬ ಹಾಲಿನ ಮಳೆ ಹರಿಸುವ ದನಗಳಿದ್ದವು. ಬತ್ತದ ಕಣಜ ಧಾನ್ಯದಿಂದ ತುಂಬಿ ತುಳುಕುತ್ತಿತ್ತು. ಪ್ರಕೃತಿಯ ಪ್ರಶಾಂತ ಪರಿಸರದಲ್ಲಿ ಮರಗಳು ಫಲಭಾರದಿಂದ ಬಳುಕುತ್ತಿದ್ದವು. ಸುಖ ಸಮೃದ್ಧಿ ನೆಮ್ಮದಿ ಬದುಕಿನಲ್ಲಿ ಬಂಗಾರದಂತಿತ್ತು.

ಆದರೆ ಇಂದು ನಮ್ಮ ನಡತೆ, ಬದುಕು ಯಾಂತ್ರಿಕವಾಗಿದೆ. ಕೃತಕ ಸ್ಪರ್ಶದಿಂದ ಮಲಿನವಾಗಿದೆ. ಮನೆಗೆ ಬಂದ ಅತಿಥಿಯೆದುರು ಚೆಂಬು ತುಂಬ ಸಿಹಿ ಮಜ್ಜಿಗೆ, ಉಪ್ಪಿನಕಾಯಿ ತಂದಿರಿಸಿ ದಾಹ ನಿವಾರಿಸಿ, ಪುಷ್ಕಳ ಭೋಜನದಿಂದ ಕ್ಷುಧೆಯನ್ನು ತಣಿಸುವಲ್ಲಿ ಆತ್ಮೀಯತೆ ಹೃದಯದಿಂದ ಸ್ಫುರಿಸುವ ಪ್ರೇಮ ಭಾವನೆ ಎದ್ದು ಕಾಣುತ್ತಿತ್ತು. ಈಗ ಗಂಡ ಹೆಂಡತಿ ದುಡಿಯುತ್ತಿದ್ದಾರೆ, ಅತಿಥಿಯ ಕುಶಲ ವಿಚಾರಿಸಲೂ ಅವರಿಗೆ ಸಮಯವಿಲ್ಲ. ಹೊತ್ತಿಗಿಂತ ಹೆಚ್ಚು ಕಾಲ ಅವರ ಬಾಡಿಗೆ ಮನೆಯಲ್ಲಿ ಇರಲು ಅವಕಾಶವೂ ಇಲ್ಲ.

ಮಾನವೀಯ ಭಾವನೆಗಳು ಬತ್ತಿರುವುದಕ್ಕೆ ಜನಸಂಖ್ಯೆ ಏರಿರುವ ಸಮಸ್ಯೆ ಕಾರಣ ಅಲ್ಲ. ಬೆಲೆಯೇರಿಕೆ ಇರಬಹುದು, ಹೃದಯದಲ್ಲಿ ಅಂತರ್ಗತವಾದ ಸದ್ಭಾವನೆಗಳನ್ನು ಮುರುಟಿಸುವಷ್ಟು ಅದರ ಕಾವು ಏರಿಲ್ಲ. ನಮ್ಮ ಸಂಸ್ಕೃತಿ ಏನು ಕಲಿಸಿದೆ ಎಂದು ತಿಳಿಯುವ ಹಂಬಲವೇ ನಮಗೆ ಇಲ್ಲ. ನನ್ನಮಗ ಬ್ಯಾಂಕ್ ನೌಕರನೋ ವೈದ್ಯನೋ ಆಗಬೇಕು. ಹೊಸಮನೆ ನನ್ನದಾಗಬೇಕು. ಮುಪ್ಪಿನಲ್ಲಿ ಆರಾಮವಾಗಿ

ಇರಲು ಬೇಕಾದಷ್ಟು ಹಣ ಸಂಗ್ರಹಿಸಿಡಬೇಕು. ಇದೇ ಬದುಕಿನ ಚರಮಗುರಿಯಾಗಿರುವ ಮಾನವನಿಗೆ ಇನ್ನೊಬ್ಬರ ಕಷ್ಟದಲ್ಲಿ ನೆರವಾಗಲು ಲೋಭತನ ಬಿಡದು. ಇನ್ನೊಬ್ಬರ ಸುಖವನ್ನು ಸ್ವಂತ ಹಿತಕ್ಕಾಗಿ ಬಲಿಕೊಡಲು ಆತ ಹೇಸಲಾರ. ಯಾರು ಹಾಳಾದರೇನಂತೆ ತನಗೆ ಸುಖವಾದರೆ ಸಾಕು ಎಂಬ ಒಂದು ಗುರಿ ಅವನನ್ನು ಮಾನವತೆಯಿಂದ ದೂರವಿಡುತ್ತದೆ.

ಸಾಯಂಕಾಲ ದೇವರಿಗೆ ಒಂದು ಸಲ ನಮಸ್ಕರಿಸಿ ದೇವರ ಹೆಸರು ಸ್ಮರಿಸಲು ಮಗುವಿಗೆ ಬಿಡುವಿಲ್ಲ. ಆತ ಕಲಿಯುತ್ತಿರುವ ಆಂಗ್ಲ ಮಾಧ್ಯಮ ಶಾಲೆಯಲ್ಲಿ ಅವನಿಗೆ ಅಷ್ಟು ಹೋಂ ವರ್ಕ್ ಕೊಟ್ಟಿರುತ್ತಾರೆ. ಗಂಡ ಹೆಂಡತಿಯ ಅಸದೃಶ ಪ್ರೇಮ ಬಂಧನ ನಮ್ಮ ಸಂಸ್ಕೃತಿಯ ಚೌಕಟ್ಟಿನಲ್ಲಿ ಕಾಣ ಬರುವಂತೆ ಅನ್ಯ ದೇಶದಲ್ಲಿ ಕಾಣಿಸದು. ಇಂದು ವರದಕ್ಷಿಣೆಗಾಗಿ ಕೈಯೊಡ್ಡುವ ವ್ಯಾಪಾರಿ ವರ್ಗ. ಬೇಡವೆಂದರೂ ಒತ್ತಾಯಿಸಿ ಕೊಡುವ ಪ್ರತಿಷ್ಠಿತ ವರ್ಗದ ನಡುವೆ ಗಂಡು ಹೆಣ್ಣಿನ ಸಮಾನತೆಯ ಕೂಗು. ಈ ಪ್ರೇಮವನ್ನು ಕಲಕಿ ಬಿಟ್ಟಿದೆ.

ನಮ್ಮ ದೇಶದಲ್ಲಿ ಸುಮಾರು ಐದು ದಶಕಗಳಿಂದೀಚೆಗೆ ಬದುಕು ಬದಲಾವಣೆ ಹೊಂದಿದೆ. ಇಲ್ಲಿನವರ ತ್ಯಾಗ, ಪ್ರೀತಿ, ಅತಿಥಿ ಸತ್ಕಾರ, ಉದಾರತೆ ಇದೆಲ್ಲವೂ ಪರದೇಶದ ಯಾತ್ರಿಕರಿಂದ ಮುಕ್ತ ಕಂಠದಲ್ಲಿ ಹೊಗಳಲ್ಪಟ್ಟಿವೆ. ಈಗ ನಮಗೆ ಪಾಶ್ಚಾತ್ಯರ ನಡತೆಯೇ ಚಿತ್ತಾಕರ್ಷಕ ಎನಿಸಿದೆ. ಸಾಲಾಗಿ ಕುಳಿತು ಸಹನಾ ಅವತು ಎನ್ನುತ್ತಾ ಶಿಸ್ತುಬದ್ಧವಾಗಿ ಮಾಡುವ ಊಟದ ದೃಶ್ಯ ಕೂಡ ಅಪರೂಪವಾಗಿದೆ, ಶುಭ ಸಮಾರಂಭಗಳಲ್ಲಿ ತಟ್ಟೆ ಹಿಡಿದು ಶನಿವಾರ ಭಿಕ್ಷೆಗೆ ಹೊರಟವರಂತೆ ಬೇಡಿ ತಂದು ನಿಂತು ಕೊಂಡೇ ಉಣ್ಣುವ ಬಫೆ ಎಂಬ ಶಿಕ್ಷೆ ಅನೇಕರಿಗೆ ಅನುಕೂಲವಾಗಿದ್ದರೂ ನಮ್ಮ ಸಂಪ್ರದಾಯದ ಚೌಕಟ್ಟಿನಿಂದ ಹೊರಗುಳಿದು ಏನೋ ಒಂದು ತರಹದ ಜಿಗುಪ್ಸೆಯನ್ನೇ ಮೂಡಿಸುತ್ತದೆ.

ಈ ನಾಗರಿಕತೆಯಿಂದ ಅನಾಹುತವಾಗಿದೆ, ಆಗುತ್ತಲೇ ಇದೆ. ಹಿಂದಿನವರು ಯಾವುದನ್ನು ಶಾಸ್ತ್ರ ಎನ್ನುತ್ತಿದ್ದರೋ ಅದು ವೈಜ್ಞಾನಿಕವಾಗಿ ಸತ್ಯ ಎಂದು ಈಗೀಗ ತಿಳಿಯುತ್ತಾ ಬಂದಿದೆ. ನಮ್ಮ ಅವಗಣನೆಯಿಂದ ಅದೆಷ್ಟೋ ನಾರುಬೇರು ಔಷಧಿಗಳ ಬಳಕೆ ಮೂಲೆಗುಂಪಾಗಿದೆ. ನಮ್ಮ ಸಂಪ್ರದಾಯ ಆಚಾರ ವಿಚಾರಗಳಿಗೆ ಸಂಸ್ಕೃತಿಯ ತಳಹದಿ ಇತ್ತು. ಪಾಶ್ಚಾತ್ಯ ಅಂಧಾನುಕರಣೆಯಿಂದ ಅದನ್ನೆಲ್ಲ ಸಾರಾಸಗಟಾಗಿ ತಿರಸ್ಕರಿಸಿದುದರ ಫಲವಾಗಿ ನಮ್ಮ ಬದುಕಿನಲ್ಲಿ ದಿವ್ಯವಾದ ಶಾಂತಿ ಇಲ್ಲ. ನೆಮ್ಮದಿ ಇಲ್ಲ. ಬಾಳಿನಲ್ಲಿ ಶುದ್ಧವಾದ ಅನುರಾಗ ಸಿಗುವುದಿಲ್ಲ. ಗೊಡ್ಡು ನಂಬಿಕೆಗಳೆಂದು ಜರಿದರೆ ಏನು ಫಲ ? ಚಿಂತಿಸಿ ನೋಡಿದರೆ ನಾವು ನಡೆದು ಬಂದ ದಾರಿಯ ಅವಲೋಕನದಿಂದ ಕಳೆದುಕೊಂಡ ಆನಂದ ಸಿಕ್ಕೀತು.



# ಕೆಲಸ ಹಾಗೂ ಜೀವನ ರಸ

ಬಿ. ಸುಬ್ರಾಯ ಅಡಿಗ. ನಿವೃತ್ತ ಶಿಕ್ಷಕರು, ಸಂಡೂರು, ಬಳ್ಳಾರಿ ಜಿಲ್ಲೆ-783 139.

ಏನೇನೂ ಕೆಲಸವಿಲ್ಲದ ರಜಾದಿನವೇ ನಿಜಕ್ಕೂ ಸೌಭಾಗ್ಯದ ದಿನವೆಂದು ಅನೇಕರು ಭಾವಿಸುತ್ತಾರೆ. ಪೂರ್ಣ ವಿಶ್ರಾಂತಿ ನಿರುದ್ಯೋಗ ಯಾವ ಹೊಣೆಗಾರಿಕೆಯೂ ಇಲ್ಲ. ನಿಯಮಪಾಲನೆಯ ಅಗತ್ಯವೂ ಇಲ್ಲ. ಮನಬಂದಂತೆ ಆಚರಿಸಬಹುದು. ನಮ್ಮಲ್ಲಿ ಅಧಿಕಾರದ ಜನ ಸುಖಕ್ಕೆ ಈ ಪರಿಭಾಷೆಯನ್ನೇ ಹೇಳುತ್ತಾರೆ. ಆದರೆ ಇಂಥ ಕಲ್ಪನೆಯೇ ಭ್ರಾಮಕವಾದುದು. ಏನೇನೂ ಕೆಲಸ ಮಾಡದೆ ವಿಶ್ರಾಂತಿ ಆನಂದ ಸಿಗುವುದು ಅಸಾಧ್ಯ. ನಮ್ಮ ಇಡೀ ಬದುಕು ಉದ್ದೇಶಹೀನತೆ ಹಾಗೂ ಕಾರ್ಯಹೀನತೆಯ ಸಮಾನಾರ್ಥಿಯಲ್ಲ. ಪ್ರಾಣಿಗಳಲ್ಲಿ ಯಾವುದೂ ನಿಷ್ಕ್ರಿಯವಾಗಿಲ್ಲವೆಂಬುದು ಪ್ರಾಣಿಜಗತ್ತಿನ ಅಧ್ಯಯನದಿಂದ ಮನವರಿಕೆಯಾಗುತ್ತದೆ. ಪಶು ಪಕ್ಷಿಗಳೆಲ್ಲವೂ ತಮ್ಮ ಸಹಜ ಪ್ರವೃತ್ತಿಯ ಪ್ರೇರಣೆಯಿಂದ ಕಾರ್ಯಗತವಾಗಿರುತ್ತವೆ. ಕಾಡು ಪ್ರಾಣಿಯನ್ನು ಯಾವುದಾದರೂ ಪಂಜರದಲ್ಲಿ ಬಂಧಿಸಿಡಿ. ಅದು ಕ್ಷಣಕಾಲ ಸ್ಥಿರವಾಗಿ ಕುಳಿತಿರಲಾರದು. ನೀವು ಯಾವುದಾದರೂ ಮೃಗಾಲಯಕ್ಕೆ ಹೋಗಿ ನೋಡಿದರೆ ಈ ಮಾತಿನ ಸತ್ಯತೆ ಮನವರಿಕೆಯಾಗುವುದು. ಹೆಬ್ಬಾವು ನೌಕರಿ ಮಾಡುವುದಿಲ್ಲವೆಂದೂ ಹಕ್ಕಿ ಕೆಲಸ ಮಾಡವುದಿಲ್ಲವೆಂದೂ ಭಗವಂತನಿಂದಲೇ ಎಲ್ಲವೂ ತಾನಾಗಿಯೇ ಅವಕ್ಕೆ ಸಿಗುವುದೆಂದೂ ಹಿಂದಿ ಕವಿಯೊಬ್ಬ ಹಾಡಿದ್ದಾನೆ. ಇದು ಕೇವಲ ಪರಮುಖಾಪೇಕ್ಷಿಯಾದ ಆಲಸಿಯ ಅಪಲಾಪ. ಹೆಬ್ಬಾವು ಬೇರೆಯುವರ ನೌಕರಿಯಲ್ಲಿರದಿದ್ದರೂ ಬದುಕಿಗಾಗಿ ಹೋರಾಟ ಮಾಡಿಯೇ ಮಾಡುತ್ತದೆ. ಬಡಪಾಯಿ ಹಕ್ಕಿ ಕ್ಷಣಕಾಲವೂ ಸುಮ್ಮನೆ ಕುಳಿತಿರುವುದಿಲ್ಲ. ಪಕ್ಷಿಗಳ ಹಾರಾಟ ಹಾಗೂ ಜೀವನದ ಹೋರಾಟದ ಪರಿಚಯವೇ ಇರದ ಇಂಥ ಕವಿಗಳಿಗೇನೆನ್ನಬೇಕು !

ಮನುಷ್ಯ ಕೂಡ ಪಕ್ಷಿಗಳಂತೆಯೇ ಬದುಕಿರಲು ಕಾರ್ಯಾಸಕ್ತನಾಗಿರಬೇಕಾಗುತ್ತದೆ. ಎಲ್ಲ ಆಟಪಾಟಗಳೂ ಮೂಲನಿವಾಸಿಗಳ ಬದುಕಿನ ಅನುಕರಣವೇ ಆಗಿದೆ. ಆಲಸ್ಯದಲ್ಲಿ ಉನ್ಮಾದದ ಅಂಶ ವಿದ್ದರೂ ಆನಂದವಿಲ್ಲ. ಏನೂ ಮಾಡದಿರುವುದರಲ್ಲಿ ಸಂತೋಷ ಎಲ್ಲಿಯದು! ಯಾವುದಾದರೂ ಕೆಲಸವನ್ನು ಚೆನ್ನಾಗಿ ಮಾಡುವುದರಲ್ಲೂ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸುವುದರಲ್ಲೂ ಉಂಟಾಗುವ ಸಂತೋಷವನ್ನು ಅನುಭವದಿಂದಲೇ ತಿಳಿಯಬೇಕು.

ವಿಶ್ರಾಂತಿಯ ದಿನಗಳಲ್ಲಿ ಇಮ್ಮಡಿ ಉತ್ಸಾಹದಿಂದ ಕೆಲಸಮಾಡಬೇಕೆಂದು ನಮ್ಮಲ್ಲಿ ಹೆಚ್ಚಿನವರು ರಜೆ ಬಯಸುತ್ತಾರೆ. ಹೊಣೆಗಾರಿಕೆಯಿಂದ ಬಿಡುಗಡೆ ಪಡೆದಾಗ ತಾತ್ಕಾಲಿಕವಾಗಿ ಸುಖ ಸಿಗಬಹುದು. ಜೀವನವನ್ನು ಪ್ರೀತಿಸುವ ಯಾರೊಬ್ಬರೂ ತಾವು ಎಂದೆಂದಿಗೂ ನಿಷ್ಕ್ರಿಯರಾಗಿರಲು ಖಂಡಿತ ಬಯಸಲಾರರು

ನಿಮುಗೇನು ಕೆಲಸವಿರದಿದ್ದರೆ ಬೇಗ ಬೇಗನೆ ಏನಾದರೂ ಕೆಲಸ ಹುಡುಕಿಕೊಳ್ಳಿರಿ. ನೀವು ಜೀವನದಲ್ಲಿ ನಿಮ್ಮ ಕ್ಷೇತ್ರವನ್ನು ಆರಿಸಿಕೊಂಡಿದ್ದರೆ ಅದನ್ನು ಸಮೃದ್ಧಗೊಳಿಸಲು ಪ್ರಯತ್ನಿಸಿರಿ. ನಿಮ್ಮ ಅಸ್ತಿತ್ವವನ್ನು ತೋರ್ಪಡಿಸುವಂತಹ ಯಾವ ಕೆಲಸವನ್ನಾದರೂ ಮಾಡಿರಿ. ಹೊಣೆಗಾರಿಕೆ ತಪ್ಪಿಸಿಕೊಳ್ಳಲು ಪ್ರಯತ್ನಿಸಬೇಡಿ. ನಿಮ್ಮಿಂದ ಸಾಧ್ಯವಾಗುವಷ್ಟು ಕೆಲಸವನ್ನು ಅಗತ್ಯ ಮಾಡಿರಿ. ಮೆಲ್ಲ ಮೆಲ್ಲನೆ ನಿಮ್ಮ ಕಾರ್ಯಕ್ಷಮತೆ ಹೆಚ್ಚಿ ಆ ಕೆಲಸ ನಿಮಗೆ ಪ್ರಿಯವಾಗವುದೆಂದು ನೀವು ಸ್ವತಃ ಕಾಣುವಿರಿ. ಅಲ್ಲದೆ ಕೆಲಸದಿಂದ ನಿಮಗೆ ದಣಿವೂ ಉಂಟಾಗದು.

**ಸಫಲತೆ ಹಾಗೂ ಅದರ ಬೆಲೆ**

ಎರಡನೇ ರೀತಿಯಜನ ಸಫಲತೆಗಾಗಿ ಯಾವುದಾದರೂ ಆಕಸ್ಮಿಕ ಚಮತ್ಕಾರದ ದಾರಿ ಕಾಯುತ್ತಿರುತ್ತಾರೆ. ಆದರೆ ಜೀವನದಲ್ಲಿ ಅಂಥ ಚಮತ್ಕಾರಗಳು ಬಲು ಕಡಿಮೆ. ಬೆಲೆತೆರದೆಯೇ ದೊರೆಯುವ ಸಫಲತೆ ನೀರಸವೆನಿಸುವುದು. ಅದು ಕ್ಷಣಿಕವೆನಿಸಿದರೂ ಆಶ್ಚರ್ಯಪಡಬೇಕಿಲ್ಲ. ಅನಾಯಾಸವಾಗಿ ಅಕಸ್ಮಾತ್ ದೊರೆಯುವ ಸಫಲತೆ ನಮಗೆ ಸುಖನೀಡುವುದಿಲ್ಲ. ಸಫಲತೆ ಹಾಗೂ ಸಮೃದ್ಧಿಯ ಪ್ರತಿಯೊಂದು ಮೆಟ್ಟಿಲನ್ನು ಏರುತ್ತಾ ಅದರ ಶಿಖರವನ್ನು ತಲುಪುವವರೇ ಶಿಖರದ ಮೇಲೆ ತಲುಪುವ ನಿಜವಾದ ಆನಂದ ಅನುಭವಿಸುತ್ತಾರೆ.

ನಮಗೆ ನಮ್ಮ ಕೆಲಸದ ಪೂರ್ಣ ತೃಪ್ತಿ ದೊರೆಯಲೆಂಬುದೇ ದಿನಾಲೂ ನಮ್ಮೆಲ್ಲರ ಉದ್ದೇಶವಾಗಿರಬೇಕು. ಈ ಅನುಭವ ಹೆಚ್ಚಿನ ಜನರ ಮಾನಸಿಕ ಪ್ರವೃತ್ತಿಯನ್ನೇ ಅವಲಂಬಿಸಿರುತ್ತದೆ. ಕೆಲವರಿಗೆ ತಮ್ಮ ಕೆಲಸ ಬಿಟ್ಟಿಯೆಂಬ ಭಾವನೆಯಿರುತ್ತದೆ. ಇಂತಹವರಿಗೆ ಜೀವನ ಬೇಸರ ತರಿಸುವಂತಹದೂ ಭಾರವೂ ಎನಿಸಬಹುದು. ಅವರು ಎಂತೆಂತೋ ದಿನಗಳೆಯುತ್ತಾರೆ.

ನಿಮ್ಮ ಬದುಕಿನಲ್ಲಿ ನಿಮಗೆ ಆನಂದ ಇರದಿದ್ದರೆ ಎಲ್ಲೋ ಏನೋ ಕೊರತೆಯಿದೆಯೆಂದು ಭಾವಿಸಿರಿ. ದೇಹಸ್ಥಿತಿ ಇದಕ್ಕೆ ಕಾರಣವಾಗಬಹುದು. ಈ ಅಸ್ತವ್ಯಸ್ತತೆಯನ್ನು ದೂರಗೊಳಿಸಲು ಸ್ವಾಸ್ಥ್ಯ ನಿರ್ಮಾಣವೇ ಮುಖ್ಯ ಔಷಧ. ಅದರಿಂದಾಗಿಯೇ ನಿಮ್ಮ ಕಾರ್ಯ ಶೀಲತೆ ಚುರುಕಾಗಬಲ್ಲುದು.

ನೀವು ನಿಮ್ಮ ಅನುದಿನದ ವ್ಯವಹಾರದ ಬಗ್ಗೆ ಲಕ್ಷ್ಯವಿಡಿರಿ. ನೀವು ಹೆಚ್ಚು ತಿನ್ನುತ್ತೀರಾ ? ಎಂದು ನೋಡಿಕೊಳ್ಳಿರಿ; ಅಥವಾ ಮಲಬದ್ಧತೆಯ ತೊಂದರೆಯೂ ನಿಮಗಿದ್ದೀತು. ಇವೇನೂ ದೊಡ್ಡ ತೊಂದರೆಗಳಲ್ಲ. ಕೆಲ ದಿನಗಳ ಯೋಗ್ಯ ಆಹಾರ ವಿಹಾರ ಕ್ರಮದಿಂದಲೇ ಈ ಅವ್ಯವಸ್ಥೆ ದೂರಾಗಬಲ್ಲುದು.



ಕೆಲವೊಮ್ಮೆ ಮಾನಸಿಕ ಸಂಕೀರ್ಣತೆಯಿಂದಾಗಿಯೂ ನಮಗೆ ಕೆಲಸದಲ್ಲಿ ತೃಪ್ತಿ ಸಿಗುವುದಿಲ್ಲ. ನಾವು ಕೆಲಸ ಬಿಟ್ಟು ಜೀವನದ ವಿಸ್ತಾರವನ್ನು ನೋಡಲು ಅಸಮರ್ಥರೆನಿಸುತ್ತೇವೆ.

ಏನೇ ಇದ್ದರೂ ಕೆಲಸ ಮಾಡುವುದೇ ಮನುಷ್ಯನ ಹಣೆ ಬರಹ. ನಮ್ಮಲ್ಲಿ ಪ್ರತಿಯೊಬ್ಬರೂ ತಂತಮ್ಮ ಹೊಣೆಗಾರಿಕೆ ನಿರ್ವಹಿಸುತ್ತ ಸಮಾಜದ ಕುರಿತು ತಮ್ಮ ಕರ್ತವ್ಯವನ್ನು ಪೂರ್ಣಗೊಳಿಸುತ್ತಾರೆ. ಹಾಗೆ ಮಾಡದವರು ಭಾಗ್ಯಹೀನರು.

ನಿಜವಾದ ಕೆಲಸವಲ್ಲದೆ ನಮಗೆ ಬೇರಾವುದೂ ವಾಸ್ತವಿಕ ಆನಂದ ನೀಡಲಾರದು. ಪ್ರಪಂಚದ ಪ್ರತಿಯೊಬ್ಬ ಸುಖೀ ಮನುಷ್ಯನೂ ತನ್ನ ಕೆಲಸವನ್ನು ಪ್ರೀತಿಸುತ್ತಾನೆ. ಬೆಳಿಗ್ಗೆ ಎದ್ದು ಪ್ರಾತಃಕಾಲದ ಚಟುವಟಿಕೆಗಳನ್ನು ಉತ್ಸಾಹ ಪೂರ್ವಕ ಸ್ವಾಗತಿಸಲಾರದಂತಹನು ತನ್ನ ನಡತೆಯ ಬಗ್ಗೆ ವಿಮರ್ಶೆ ನಡೆಸಬೇಕು....ಮತ್ತು ದುರಭ್ಯಾಸಗಳನ್ನು ಬಿಟ್ಟುಬಿಡಬೇಕು.

**ಅತೃಪ್ತಿಯೇ ವಿಕಾಸದ ಪ್ರೇರಕ :** ನಿಮ್ಮ ಅತೃಪ್ತಿಯೇ ಪತನದ ಕಂದಕವಲ್ಲ. ವಿಕಾಸದ ಮೆಟ್ಟಿಲನ್ನಾಗಿ ಮಾಡಿರಿ. ನಾವು ನಮ್ಮ ಪ್ರಸಕ್ತ ಜೀವನದಲ್ಲಿ ತೃಪ್ತಿ ತಳೆದೆವೆಂದರೆ, ನಮಗೆ ಪ್ರಗತಿಯ ಪ್ರೇರಣೆಯೇ ದೊರೆಯಲಾರದು. ತಮ್ಮಲ್ಲಿ ಪ್ರತಿಯೊಬ್ಬರೂ ಯೋಗ್ಯ ಕಾರ್ಯವನ್ನು ಶೋಧಿಸಬೇಕು, ಮತ್ತು ಆ ಶೋಧದಲ್ಲೇ ಲೀನರಾಗಿ ಇಷ್ಟಾರ್ಥ ಪಡೆಯಬೇಕು.

ಒಂದು ಕೆಲಸವನ್ನು ಉತ್ಸಾಹಪೂರ್ವಕವಾಗಿ ಮಾಡುವುದಷ್ಟೇ ಅಲ್ಲ. ಅದನ್ನು ಆಸಕ್ತಿ ಹಾಗೂ ತಾಳ್ಮೆಯಿಂದ ಮಾಡಬೇಕು. ಒಂದು ಸಾವಿರ ಮೈಲು ಉದ್ದದ ಯಾತ್ರೆಯ ಆರಂಭ ಮೊದಲ ಹೆಜ್ಜೆಯಿಂದಾಗುವುದೆಂದು ಒಂದು ಚೀನಿ ಗಾದೆಯಿದೆ. ಆದರೆ ಆ ಯಾತ್ರೆಯ ಅಂತ್ಯ ಮೊದಲ ಹೆಜ್ಜೆಯಿಂದಾಗುವುದಿಲ್ಲವೆಂಬ ಅಂಶವನ್ನು ನಾವು ಮರೆಯಬಾರದು. ನಾವು ಎಡೆಬಿಡದೆ ನಡೆಯುತ್ತಿದ್ದರೇನೇ ನಮ್ಮ ಗುರಿ ತಲುಪಬಹುದು. ಆಸಕ್ತಿ ಹಾಗೂ ತಾಳ್ಮೆ ಇವೆರಡೂ ಸಫಲತೆ ಪಡೆಯಲು ಮುಖ್ಯ.

ಹಿಮಾಲಯದ ಶಿಖರವನ್ನು ಮುಟ್ಟಿದ ಶೇರ್ಪಾತೇನಸಿಂಗ್ ಮಧ್ಯ ದಾರಿಯಲ್ಲೇ ಹೆದರಿ ಹಿಂದೆ ಬರುತ್ತಿದ್ದರೆ ಅವನು ಈ ಕೀರ್ತಿ ಪಡೆಯುತ್ತಿದ್ದನೆ ? ಅವನ ಇತರ ಸಂಗಾತಿಗಳು ಹೆದರಿ ಹಿಮ್ಮೆಟ್ಟಿದಾಗ, ಅವನು ಮಾತ್ರ ಕಂಗೆಡದೆ ಮೇಲೇರುತ್ತ ಹೋದ. ಜೀವನದ ಗೌರೀಶಂಕರವನ್ನು ಮುಟ್ಟಲು ನೀವೂ ಹಾಗೆಯೇ ನಿರಂತರ ಸಾಗುತ್ತ ಹೋಗಿರಿ..... ನೋಡಿ.... ಗೌರೀಶಂಕರ ಎದುರಿಗೆ ರಾರಾಜಿಸುತ್ತಿದೆ. ●

(ಹಿಂದಿಯಿಂದ)

# ಅಳಿವಿನ ಅಂಚಿನಲ್ಲಿ "ರೈತನಮಿತ್ರ"

❀ ಎನ್. ಆರ್ ಪಾಟೀಲ್, ಸಾರ್ಟಿಂಗ್ ಕಾರ್ಯಾಲಯ, ಆರ್. ಎಂ. ಎಸ್,
ಹೊಸಪೇಟೆ, ಬಳ್ಳಾರಿ ಜಿಲ್ಲೆ.

ಆದಿಕಾಲದಿಂದಲೂ ಭೂಮಿಯನ್ನು ಹದಗೊಳಿಸುವ ಕಾರ್ಯದಲ್ಲಿ ಮಾನವನಿಗೆ ಸಹಾಯ ಮಾಡುತ್ತಿರುವ ನಿಸರ್ಗ ನಿರ್ಮಿತ ರೈತನ ಮಿತ್ರನೊಬ್ಬನಿದ್ದಾನೆ. ರೈತನ ಈ ಮಿತ್ರ ಕೃಷಿಭೂಮಿಯಲ್ಲಿ ಸುಮಾರು 8 ಅಡಿಗಳವರೆಗೆ ಆಳಕ್ಕಿಳಿದು ಅಲ್ಲಿಯ ಮಣ್ಣನ್ನು ಮೇಲಕ್ಕೆ ತರುತ್ತಾನೆ. ಭೂಮಿಯನ್ನು ಸಡಿಲಗೊಳಿಸಿ ಗಾಳಿ ಆಡುವಂತೆ ಮಾಡುತ್ತಾನೆ. ಏನಿಲ್ಲವೆಂದರೂ ಒಂದು ವರ್ಷದಲ್ಲಿ 10 ಟನ್ ಮಣ್ಣನ್ನು ಮೇಲೆ ತಂದು ಹಾಕುತ್ತಾನೆ. ಇವನಿಗೆ ವಿಶ್ರಾಂತಿ ಎಂಬುದೇ ಇಲ್ಲ. ಭೂಮಿಯನ್ನು ಹದ-ಗೊಳಿಸುವ ಕಾರ್ಯವನ್ನು ನಿರಂತರವಾಗಿ ಮಾಡುತ್ತಲೇ ಇರುತ್ತಾನೆ. ನಮ್ಮ ರೈತರಿಗೆ ಆದಿಯಿಂದಲೂ ಮಿತ್ರನಾಗಿ, ಉಪಕಾರಿಯಾಗಿ, ಉಳಿದುಕೊಂಡು ಬಂದಿರುವ ನಿಸರ್ಗ ನಿರ್ಮಿತ ಈ ರೈತನ ಮಿತ್ರನೇ "ಎರೆಹುಳು".

ಎರೆಹುಳು ಮನುಕುಲದ ಚರಿತೆಯ ಪ್ರಾರಂಭಿಕ ಹಂತದಲ್ಲೂ ಭೂಮಿಯನ್ನು ಹದಗೊಳಿಸುವ, ಫಲವತ್ತಾಗಿಸುವ, ಕಾರ್ಯವನ್ನು ಮಾಡುತ್ತಲೇ ಬಂದಿದೆ. ಇದನ್ನು ಖ್ಯಾತ ವಿಜ್ಞಾನಿ ಚಾರ್ಲಸ್ ಡಾರ್ವಿನ್ "ನಿಸರ್ಗನೇಗಿಲು" ಎಂದು ಹೇಳಿದ್ದಾರೆ. ಚಾರ್ಲಸ್ ಡಾರ್ವಿನ್ 1881 ರಲ್ಲಿ ಮಣ್ಣುಹುಳುಗಳ ಮೇಲೆ ತಾನು ಪ್ರಕಟಿಸಿದ ಲೇಖನದಲ್ಲಿ ಎರೆಹುಳುಗಳನ್ನು ಕುರಿತು ಹೀಗೆ ಹೇಳುತ್ತಾರೆ. ಈ ನಮ್ಮ ಜೀವಿಗಳಂತೆ ಬೇರೆ ಅನೇಕ ಪ್ರಾಣಿಗಳು ಭೂಮಿಯ ಇತಿಹಾಸದಲ್ಲಿ ಮಹತ್ವ ಪಾತ್ರವನ್ನು ನಿರ್ವಹಿಸಿರುವದೇ ಎಂಬುದು ಸಂಶಯಾಸ್ಪದ. ಮನುಷ್ಯರಂತೆ ಎರೆಹುಳುಗಳೂ ಆಲೋಚಿಸುತ್ತವೆ. ಅದಕ್ಕೆ ಸಾಕ್ಷಿಯೆಂದರೆ ಎರೆಹುಳುಗಳು ಎಲೆ ಅಥವಾ ಒಣಕಡ್ಡಿಗಳನ್ನು ತಮ್ಮ ಆಹಾರಕ್ಕಾಗಿ ಎಳೆದುಕೊಂಡು ಹೋಗುವಾಗ ಒಂದು ಕ್ರಮದಲ್ಲಿಯೇ ಎಳೆಯುತ್ತವೆ.

ಎರೆಹುಳುಗಳಲ್ಲಿ 3,000 ಪ್ರಕಾರಗಳಿದ್ದು ಅವುಗಳು 'ಮಣ್ಣುಹುಳು" ಎಂತಲೂ ಕರೆಯುತ್ತಾರೆ. ಆಸ್ಟ್ರೇಲಿಯಾದ ಭೂಮಿಯಲ್ಲಿ 'ದೈತ್ಯ ಎರೆಹುಳು' ಎಂದು ಹೇಳುವ ಅತಿ ಉದ್ದದ ಹುಳುಗಳಿವೆ. ಅವುಗಳ ಸುತ್ತಳತೆ 3 ಸೆಂಟಿಮೀಟರ್‌ಗಳಷ್ಟಿದ್ದು ಎಷ್ಟೋ ಸಲ ಅವುಗಳನ್ನು ಹಾವೆಂದು ತಪ್ಪಾಗಿ ತಿಳಿದ ನಿದರ್ಶನಗಳಿವೆ

ಎರೆಹುಳುಗಳ ಬದುಕೆ ಒಂದು ವಿಚಿತ್ರ. ಇವುಗಳಲ್ಲಿ ಹೆಣ್ಣು-ಗಂಡೆಂಬ ಭೇದವಿಲ್ಲ. ಪ್ರತಿ ಎರೆಹುಳು ಗಂಡೂ ಆಗಿರುತ್ತದೆ ಹೆಣ್ಣೂ ಆಗಿರುತ್ತದೆ. ಅದು ಮೊಟ್ಟೆಯಿಡಬೇಕಾದರೆ ಯಾವುದೋ ಬೇರೊಂದು ಎರೆಹುಳುವಿನೊಡನೆ ಸಂಗಮಿಸುತ್ತದೆ. ಇದಕ್ಕೆ



ಉಸಿರಾಟದ ಅಂಗಗಳಿಲ್ಲ, ಚರ್ಮವು ಮೋಳೆ ಮೋಳೆಯಾಗಿರುವ, ಅಂಟು ಪದಾರ್ಥದಿಂದ ಸುತ್ತುವರೆದಿದ್ದು ಅದರ ಮೂಲಕ ಅನಿಲ ಕರಗುತ್ತದೆ. ಚರ್ಮದ ಮೂಲಕವೇ ತನ್ನೆಲ್ಲ ಕಾರ್ಯಗಳನ್ನು ನಿರ್ವಹಿಸುವ ಇದಕ್ಕೆ ಕಾಲು, ಕಣ್ಣು, ಕಿವಿಗಳಿಲ್ಲ. ಸೂರ್ಯನ ಶಾಖನನ್ನು ಸಹಿಸಿಕೊಳ್ಳದ ಎರೆಹುಳುಗಳು ನಿಶಾಂತರ ಜೀವಿಗಳು. ಎರೆಹುಳದ ಮುಂಭಾಗದಲ್ಲೊಂದು ಬಾಯಿಯಿದೆ ಮಾಂಸಲ ಮೇಲು ತುಟಿಯನ್ನೂ ಕಾಣಬಹುದು. ತನ್ನ ದೇಹದ ಹಿಂಭಾಗದಲ್ಲಿರುವ ರಂಧ್ರದಿಂದ ತನಗೆ ಬೇಡದ ಮಣ್ಣನ್ನು ಹೊರ ಹಾಕುತ್ತದೆ. ಅದರ ದೇಹದಿಂದ ಬಂದ ಮಣ್ಣು ತುಂಬ ಫಲವತ್ತಾಗಿರುತ್ತದೆ. ಎರೆಹುಳು ಆಘಾತಕ್ಕೊಳಗಾಗಿ ಅದರ ದೇಹ ಇಬ್ಭಾಗವಾದರೂ ಅದು ಸಾಯುವುದಿಲ್ಲ. ಈ ಎರಡೂ ಭಾಗಗಳಲ್ಲಿ ತಲೆಯೋ ಬಾಲವೋ ಏನು ಬೇಕೋ ಅದು ಮಾಡಿ ಮೊದಲಿನಂತೆಯೇ ಚಲಿಸಲಾರಂಭಿಸುತ್ತದೆ.

ಎರೆಹುಳುಗಳ ಮುಖ್ಯ ಆಹಾರ ಮಣ್ಣು, ಅದು ಮಣ್ಣನ್ನು ತಿಂದು ಅದರಲ್ಲಿಯ ಪ್ರಾಣಿ ಹಾಗೂ ಸಸ್ಯ ಜನ್ಯವಾದ ಅಂಶಗಳನ್ನು ಹೀರಿಕೊಂಡು ಉಳಿದ ಮಣ್ಣನ್ನು ಹೊರ ಹಾಕುತ್ತದೆ.

## ರೈತನ ಮಿತ್ರ

ಎರೆಹುಳುಗಳಿಗೆ ರೈತನ ಮಿತ್ರ ಎಂದೇ ಹೇಳುತ್ತಾರೆ. ಒಂದು ಎಕರೆ ಪ್ರದೇಶದಲ್ಲಿ ಸುಮಾರು 50,000 ಎರೆಹುಳುಗಳಿರುತ್ತವೆ ಎನ್ನಲಾಗಿದೆ. ಒಳ್ಳೆಯ ಮಣ್ಣಲ್ಲಿ ಅವುಗಳ ಸಂಖ್ಯೆ ಹೆಚ್ಚಿರುತ್ತದೆ. ಪ್ರತಿಯೊಂದು ಎರೆಹುಳುವೂ ತನ್ನ ದೇಹದ ಮೂಲಕ ಪ್ರತಿವರ್ಷ 10ಟನ್ ಮಣ್ಣನ್ನು ಸಾಗಿಸುತ್ತದೆ ಎನ್ನಲಾಗಿದೆ. ಅಂದರೆ 5 ವರ್ಷಗಳಲ್ಲಿ ಭೂಮಿಯ ಕೆಳಭಾಗದ ಒಂದಿಂಚಿನಷ್ಟು ಮಣ್ಣನ್ನು ಮೇಲಕ್ಕೆ ತಂದು ಹಾಕುತ್ತದೆ ಎನ್ನುತ್ತಾರೆ ವಿಜ್ಞಾನಿಗಳು. ಈ ಕಾರ್ಯ ನಮ್ಮ ಇಂದಿನ ಆಧುನಿಕ ಯಂತ್ರಗಳಿಂದಲೂ ಅಸಾಧ್ಯವಾಗಿದೆ ಎಂದರೆ ಯಾರಿಗಾದರೂ ಆಶ್ಚರ್ಯವಾಗಬಹುದು.

ಎರೆಹುಳು ರೈತನಿಗೆ ಸಹಾಯ ಮಾಡುವ ಇನ್ನೊಂದು ಮಹತ್ವದ ಕಾರ್ಯವೆಂದರೆ, ಮಣ್ಣಿನಲ್ಲಿರುವ ಬಹು ಉಪಯೋಗಿ ಸೂಕ್ಷ್ಮ ಜೀವಿಯಾದ "ಆರ್ಟಿನೋಮೆಸಿಟ್ಸ್" ಎಂಬ ಜೀವಿಯ ವರ್ಧನೆ. ಈ ಸೂಕ್ಷ್ಮ ಜೀವಿ ಮಣ್ಣಿನಲ್ಲಿದ್ದು, ಆ ಮಣ್ಣು ಎರೆಹುಳುವಿನ ಜೀರ್ಣಾಂಗದ ಮೂಲಕ ಹೊರ ಬಂದಾಗ, ಅದು ತನ್ನ ಸಂತಾನ ಶಕ್ತಿಯನ್ನು ಏಳುಪಟ್ಟು ಹೆಚ್ಚಿಸಿಕೊಳ್ಳುತ್ತದೆ. ಅದರ ಸಂತಾನ ಹೆಚ್ಚಿದಷ್ಟು ಮಣ್ಣು ಹೆಚ್ಚು ಫಲವತ್ತಾಗುತ್ತದೆ. ಪ್ರತಿವರ್ಷ ಭೂಮಿ ಗಾಳಿ ಮತ್ತು ಮಳೆಯಿಂದ ಕಳೆದುಕೊಳ್ಳುವ ಫಲವತ್ತತೆಯನ್ನು ಪುನಃ ತಂದು ಕೊಡುವಲ್ಲಿ ಎರೆಹುಳುವಿನ ಪಾತ್ರ ಅತ್ಯಂತ ಗಮನಾರ್ಹ.

ಪರಿಸರ ಮಾಲಿನ್ಯವನ್ನು ತಡೆಯಲು ಎರೆಹುಳು ತುಂಬ ಸಹಾಯಕ ಎಂಬುದು ಇತ್ತೀಚೆಗೆ ವೈಜ್ಞಾನಿಕವಾಗಿ ಸಿದ್ಧವಾಗಿದೆ. ಈ ಹುಳು ಸುಮಾರು 60-70 ಕೆ.ಜಿ. ಗಳಷ್ಟು ವ್ಯರ್ಥ ವಸ್ತುಗಳನ್ನು 60-70 ದಿನಗಳಲ್ಲಿ ತಿಂದು ಹಾಕುತ್ತದೆ ಎಂಬುದು ತಿಳಿದು ಬಂದಿದೆ. ಇದು ಮಾಲಿನ್ಯ ತಡೆಯುವುದರೊಂದಿಗೆ ಆ ವ್ಯರ್ಥವಸ್ತುಗಳ ಸಾಗಣೆಯ ಖರ್ಚನ್ನು ಉಳಿಸುತ್ತದೆ. ಅಮೇರಿಕಾ, ಕೆನಡಾ, ಜಪಾನ್, ಮುಂತಾದ ದೇಶಗಳಲ್ಲಿ ವ್ಯರ್ಥ ವಸ್ತುಗಳ ವಿಲೇವಾರಿಯಲ್ಲಿ ಎರೆಹುಳುಗಳ ಮಹತ್ವಪೂರ್ಣ ಪಾತ್ರ ಕುರಿತು ಸಂಶೋಧನೆಗಳು ಮುಂದುವರೆದಿವೆ.

**ಅಳಿವಿನ ಅಂಚಿನಲ್ಲಿ :-**

ಕೃಷಿವ್ಯವಸ್ಥೆಯಲ್ಲಿ ಎರೆಹುಳು ನಿರ್ವಹಿಸುತ್ತಿರುವ ಅತ್ಯಮೂಲ್ಯ ಕಾರ್ಯವನ್ನು ನಿಸರ್ಗದಲ್ಲಿ ಇನ್ನಾವುದೋ ಜೀವಿ ನಿರ್ವಹಿಸಿದ ನಿದರ್ಶನಗಳಿಲ್ಲ. ಇಂತಹ ಪರೋಪ ಕಾರಿ ಜೀವಿ ಇಂದು ಅಳಿವಿನ ಅಂಚಿಗೆ ಬಂದಿದೆ. ಇದಕ್ಕೆ ಕಾರಣ ಆಧುನಿಕ ಕೃಷಿ ವ್ಯವಸ್ಥೆ. ಇಂದು ಕೃಷಿಕರು, ತಮ್ಮ ಬೆಳೆಗಳಿಗೆ ಹೆಚ್ಚು ಇಳುವರಿಯ ಆಸೆಯಲ್ಲಿ ಹೆಚ್ಚು ಹೆಚ್ಚು ರಾಸಾಯನಿಕ ಗೊಬ್ಬರಗಳನ್ನು ಬಳಸುತ್ತಿದ್ದಾರೆ. ಆದರೆ ಈ ರಾಸಾಯನಿಕ ಅತಿಯಾದ ಬಳಕೆ ಬೆಳೆ ಹಾಗೂ ಭೂಮಿಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ ಎಂಬುದನ್ನು ವಿಜ್ಞಾನಿಗಳೇ ಕಂಡುಕೊಂಡಿದ್ದಾರೆ. ಆದರೂ ಬೆಳೆಗಳಿಗೆ ರಾಸಾಯನಿಕಗಳ ಬಳಕೆ ಕಡಿಮೆಯಾಗಿಲ್ಲ. ಇದು ಎರೆಹುಳುಗಳಿಗೆ ತುಂಬ ಮಾರಕ-ವಾಗಿ ಪರಿಣಮಿಸಿದೆ. ಭೂಮಿಯಲ್ಲಿಯ ಇತರ ಪರೋಪಕಾರಿ ಹುಳುಗಳೂ ನಾಶ-ವಾಗುತ್ತ ನಡೆದಿವೆ.

ಬೆಳೆಗಳಿಗೆ ಕೀಟಗಳ ಬಾಧೆಯನ್ನು ತಡೆಯಲು ಆಧುನಿಕ ಕೃಷಿ ವಿಜ್ಞಾನ ಕೆಲವು ಕೀಟನಾಶಕಗಳನ್ನು ಹೊರತಂದಿದೆ. ಈ ಕೀಟನಾಶಕಗಳು ಅತ್ಯಂತ ದುಷ್ಪರಿಣಾಮ ಗಳನ್ನು ಬೀರುತ್ತವೆ. ಎಂಬುದು ಈಗ ಎಲ್ಲರಿಗೂ ಸ್ಪಷ್ಟವಾಗಿದೆ. ಈ ಕೀಟನಾಶಕಗಳು ಅಪಾಯಕಾರಿ ಕೀಟಗಳನ್ನು ನಾಶ ಮಾಡುವುದರ ಜೊತೆಗೆ ಉಪಯುಕ್ತ ಕೀಟ-ಗಳನ್ನೂ ನಾಶಮಾಡುತ್ತಲಿವೆ ಅಂಥಹವುಗಳಲ್ಲಿ ಎರೆಹುಳುವೂ ಒಂದು.

ರೈತನ ಮಿತ್ರ ಎರೆಹುಳು ನಮ್ಮ ಅಜ್ಞಾನದಿಂದಲೇ ಅಳಿದು ಹೋಗುತ್ತಲಿವೆ. ಈ ನಿಸರ್ಗದತ್ತ ಮಿತ್ರನ ಕೊಡುಗೆ ಕೃಷಿಯಲ್ಲಿ ಅತ್ಯಂತ ಅಮೌಲ್ಯವಾದುದು. ಭೂಮಿಯ ಹದವರಿತು ರಾಸಾಯನಿಕಗಳನ್ನು ಬಳಸುತ್ತ ಬಂದರೆ ಈ ನಮ್ಮ ನಿಸರ್ಗ ನೇಗಿಲನ್ನು ಉಳಿಸಿಕೊಳ್ಳಬಹುದಾಗಿದೆ. ●

ಸಿದ್ಧಗಂಗಾ



# ಸಾಹಿತ್ಯ ಮತ್ತು ಸಂಸ್ಕೃತಿ

● ಡಾ. ಮೋಹನ್ ಕುಂಟಾರ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ,
ಕಮಲಾಪುರ–583 221

---

ನಾವು ನಮ್ಮ ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಅರ್ಥಮಾಡಿಕೊಳ್ಳುವಾಗ ನೆರೆಯ ಭಾಷೆಯ ಸಾಹಿತ್ಯ ಮತ್ತು ಸಂಸ್ಕೃತಿಯ ಅರಿವನ್ನು ಬೆಳೆಸಿಕೊಳ್ಳಬೇಕಾಗಿದೆ. ಪಾಶ್ಚಾತ್ಯ ಭಾಷೆಗಳ ಒಂದು ಕೃತಿಯನ್ನು ಹೆಸರಿಸುವುದೇ ನಮ್ಮ ಜ್ಞಾನದ ವ್ಯಾಪ್ತಿಯ ಕುರುಹು ಎಂಬಷ್ಟರ ಮಟ್ಟಿಗಿನ ಗಾಢ ಪ್ರಜ್ಞೆಯಿಂದಲೇ ಅನೇಕರು ಬರೆಯುತ್ತಿದ್ದಾರೆ. ಆದರೆ ನಮ್ಮ ನೆರೆಯ ಭಾಷೆ, ಸಂಸ್ಕೃತಿಗಳ ಕ್ವಚಿತ್ತಾದ ತಿಳುವಳಿಕೆಯನ್ನಾದರೂ ಅರಿತುಕೊಳ್ಳಬೇಕೆಂಬ ಹಂಬಲ ಕಾಣುವುದಿಲ್ಲ ಆಫ್ರಿಕದ ಬುಡಕಟ್ಟನ್ನು ಕುರಿತು ಕಪ್ಪು ಸಾಹಿತ್ಯದ ಓದು ನಮಗೆ ಮುಖ್ಯವಾಗುತ್ತದೆ. ಆದರೆ ನಮ್ಮ ನೆರೆಯ ಭಾಷೆಯೊಂದರ ಬುಡಕಟ್ಟನ್ನು ಕುರಿತು ಸಾಹಿತ್ಯ ಕೃತಿಗಳು ಹುಟ್ಟಿಕೊಂಡಾಗಲೂ ಅವು ನಮಗೆ ಆಸಕ್ತಿಯ ಕೇಂದ್ರಗಳಾಗುವುದಿಲ್ಲ. ಹೋಮರ್, ಇಲಿಯಟ್ ಮೊದಲಾದವರನ್ನು ಹೆಸರಿಸಿದಷ್ಟಕ್ಕೆ ಕೃತಾರ್ಥರೆಂದು ಭಾವಿಸುವ ನಮಗೆ ವಳ್ಳುವರು, ಎಳುತ್ತಚ್ಚನ್, ನನ್ನಯ್ಯರಂಥವರು ಇದ್ದಾರೆಂಬುದೂ ಮುಖ್ಯವೆನಿಸುವುದಿಲ್ಲ.

ನಾವಿಂದು ಭಾಷಾವಾರು ರಾಜ್ಯಗಳ ವಿಂಗಡಣೆ ಮಾಡಿಕೊಂಡಿದ್ದೇವೆ. ಇದೊಂದು ರಾಜಕೀಯ ವ್ಯವಸ್ಥೆಯ ಗಡಿ. ಇದು ಭಾಷೆಯನ್ನು ಕೇಂದ್ರೀಕರಿಸಿದ್ದರಿಂದ ಪರಸ್ಪರ ಸಂಸ್ಕೃತಿ ಸಾಹಿತ್ಯಗಳ ನಡುವೆ ಬೃಹತ್ ಕಂದರವಾಗಿ ಪರಿಣಮಿಸಿದೆ. ನಾವಿಂದು ಕೆಲವೇ ಗಂಟೆಗಳಲ್ಲಿ ದೇಶದ ಯಾವುದೇ ಭಾಗವನ್ನು ಹೋಗಿ ತಲುಪಬಹುದು. ಯಾನ ಸೌಲಭ್ಯದಿಂದಾಗಿ ಇವುಗಳ ಪ್ರಯಾಣದ ಅಂತರ ಕಡಿಮೆಯಾಗಿವೆ ನಿಜ. ಆದರೆ ಇದರಿಂದಾದ ಸಾಂಸ್ಕೃತಿಕ ದೂರ ಮಾತ್ರ ಅಗಾಧವಾಗಿದೆ. ನಮ್ಮ ಹಳೆಗನ್ನಡ ಕವಿಗಳಿಗೆ ಈ ರೀತಿಯ ಅನ್ಯಭಾಷಾ ಜನರ ಸಾಂಸ್ಕೃತಿಕ, ಸಾಹಿತ್ಯಕ ಅಪರಿಚಿತತೆ ಇದ್ದಿರಲಿಲ್ಲವೆನಿಸುತ್ತದೆ. ಅಂದು ಭಾಷೆಯ ಹೆಸರಲ್ಲಿ ವಿಂಗಡಿಸುವ ಗಡಿರೇಖೆಗಳಿರಲಿಲ್ಲ. ಸಂಸ್ಕೃತಿಯೊಂದಕ್ಕೆ ಗಡಿರೇಖೆಗಳನ್ನು ನಿರ್ಣಯಿಸ ಬರುವುದಿಲ್ಲ. ಸಾಮ್ರಾಜ್ಯಗಳು ಹುಟ್ಟಿದುವು ಅಳಿದುವು. ಯಾವುದೇ ಒಂದು ಸಾಮ್ರಾಜ್ಯದ ನಿರ್ದಿಷ್ಟಗಡಿ ಎಂಬುದು ಚಾಂಚಲ್ಯವಾಗಿರುತ್ತಿತ್ತು. ಒಂದು ಪ್ರದೇಶ ಕಾಲಕಾಲಕ್ಕೆ ಬೇರೆ ಬೇರೆ ರಾಜಮನೆತನಗಳ ಅಧೀನಕ್ಕೆ ಬರುತ್ತಿದ್ದಾಗ ವಿಭಿನ್ನ ಸಂಸ್ಕೃತಿಗಳ ಸಂಪರ್ಕ ಸಹಜವಾಗಿರುತ್ತಿತ್ತು. ಹಾಗಾದ್ದರಿಂದ ಪಂಪ ಆಂಧ್ರದ ಪರಿಸರವನ್ನು ಬಲ್ಲವನಾಗಿದ್ದ. ನನ್ನಯ್ಯ ಕನ್ನಡ ಸಂಸ್ಕೃತಿಯನ್ನು ಅರಿತಿದ್ದ. ಸೋಮನಾಥ ಉಭಯ ಭಾಷೆಗಳಲ್ಲೂ ಕೃತಿರಚನೆ ಮಾಡಿದ.

ಭಾಷಾವಾರು ರಾಜ್ಯ ವಿಂಗಡಣೆಯಿಂದ ನಮ್ಮ ಸಾಹಿತ್ಯ ಮತ್ತು ಸಂಸ್ಕೃತಿಗಳ ಮೇಲೆ ಸ್ಪಷ್ಟವಾದ ಪರಿಣಾಮವಾಗಿದೆ. ಅನ್ಯ ಸಂಸ್ಕೃತಿಗಳ ಅರಿವು ಖಿಲವಾಗಿದೆ. ನಮ್ಮ ದೇಶದಲ್ಲಿ ಹಲವು ಭಾಷೆಗಳಿವೆ. ಹಲವು ಸಂಸ್ಕೃತಿಗಳಿವೆ, ಇವು ಹಲವು ಪ್ರದೇಶಗಳಲ್ಲಿ ಸಮಾನ ಹಿನ್ನೆಲೆಯಿಂದ ಗೋಚರಿಸುವುವುಗಳಾಗಿವೆ. ಇನ್ನೊಂದರ ಅರಿವಿಲ್ಲದೆ ನಮ್ಮ ನಾಡಿನ ಸಂಸ್ಕೃತಿಯೊಂದನ್ನು ಮಾತ್ರ ಅರಿತು ಮಾತನಾಡುತ್ತಿರುತ್ತೇವೆ. ಕೇರಳದ ಒಂದು ಜನಾಂಗದ ಸಂಸ್ಕೃತಿ ಮತ್ತು ಅಸ್ಸಾಮಿನ ಒಂದು ಜನಾಂಗದ ಸಂಸ್ಕೃತಿಯಲ್ಲಿ ಸಮಾನತೆಯಿರಬಹುದು. ವಿಭಿನ್ನ ರಾಜ್ಯಗಳ ಎರಡು ಕಲೆಗಳಲ್ಲಿ ಸಮಾನ ಅಂಶಗಳಿರಬಹುದು. ಇವುಗಳ ತಿಳುವಳಿಕೆಯಿಲ್ಲವಾದರೆ ಅಷ್ಟರಮಟ್ಟಿಗೆ ನಮ್ಮ ದೇಶದ ಸಂಸ್ಕೃತಿಯ ಅರಿವು ಕೊರೆಯಾದಂತೆ.

ನಮ್ಮ ಸಾಹಿತ್ಯ ಚರಿತ್ರೆಗಳು, ವಿಮರ್ಶೆಗಳು ನೆರೆಯ ಸಂಸ್ಕೃತಿಗಳ ಸಮಕಾಲೀನ ಪ್ರಜ್ಞೆಯಿಂದ ದಾಖಲಾಗಬೇಕಾಗಿದೆ. ನಮ್ಮ ಸಾಹಿತ್ಯ ಚರಿತ್ರೆಗಳನ್ನು ದಾಖಲುಮಾಡಿದೆ. ಸಮಕಾಲೀನ ಅನ್ಯ ಭಾಷಾ ಸಾಹಿತ್ಯ ಸಂಸ್ಕೃತಿಗಳ ಅರಿವಿನ ಹಿನ್ನೆಲೆಯಿಂದ ಒಡಮೂಡಿದ ಕೃತಿಗಳ ಕುರಿತ ಚರಿತ್ರೆಯನ್ನು ಬರೆಯುವಾಗ ಅನ್ಯ ಸಂಸ್ಕೃತಿಗಳ ಇತಿಹಾಸವೂ ಗಮನದಲ್ಲಿರಬೇಕು. ಒಬ್ಬ ಸೃಜನಶೀಲ ಬರಹಗಾರ ಯಾವುದೇ ಒಂದು ಪ್ರದೇಶದ ಸಾಂಸ್ಕೃತಿಕ ರೂಪದ ಹಿನ್ನೆಲೆಯಿಂದಲೇ ಬರೆಯಲಾರ. ಆತ ತನ್ನ ಬದುಕಿನಲ್ಲಿ ಮುಖಾಮುಖಿಯಾದ ಅನೇಕ ವಿಭಿನ್ನ ಭಾಷೆಯ ಜನರ ಸಂಸ್ಕೃತಿಯ ಪ್ರತ್ಯುತ್ಪನ್ನಮತಿಯಾಗಿರುತ್ತಾನೆ. ಇವುಗಳನ್ನು ಕುರಿತ ವಿಮರ್ಶೆ ಮಾಡುವಾಗಲೂ ವಿಮರ್ಶಕನಿಗೂ ಅವುಗಳ ಅರಿವಿನ ಹಿನ್ನಲೆ ಬೇಕಾಗುತ್ತದೆ. ಅದಿಲ್ಲವಾದರೆ ವಿಮರ್ಶೆ ಕಾಲ ಸಂದಂತೆ ಅಪ್ರಸ್ತುತವಾಗಿ ಬಿಡುತ್ತದೆ. ಅಪ್ರಸ್ತುತ ಆಗಬಹುದಾದ ಅರ್ಹತೆ ಪಡೆಯುವುದಾದರೆ ವಿಮರ್ಶೆ ಎಂಬ ಪ್ರಕಾರದ ಅಗತ್ಯವೇ ಉಳಿಯಲಾರದು.

ನಮ್ಮ ಅನೇಕ ವಿಮರ್ಶೆಗಳನ್ನು ಎರಡನೇ ಬಾರಿ ಓದುವ ಅಗತ್ಯ ಬರುವುದಿಲ್ಲ. ಆದರೆ ಮೂಲ ಕೃತಿಯನ್ನು ಒಂದಕ್ಕಿಂತ ಹೆಚ್ಚು ಬಾರಿ ಓದುವ ಆಸಕ್ತಿ ಉಳಿದಿರುತ್ತದೆ. ಯಾವ ಸೃಜನಶೀಲ ಕೃತಿಗಳ ಉಳಿವಿಗೂ, ಜನಪ್ರಿಯತೆಗೂ ವಿಮರ್ಶೆ ಎಂಬ ಮಧ್ಯವರ್ತಿ ಜ್ಞಾನದ ಅಗತ್ಯವಿಲ್ಲ. ಒಂದು ಕೃತಿಯ ಪ್ರಚಾರವನ್ನೂ ಟೀಕೆಯನ್ನೂ, ಮಾಡಿದ ವಿಮರ್ಶೆ ಕಾಲದ ಮರೆಗೆ ಸಂದು ಹೆಸರಿಲ್ಲದಂತಾಗಿದೆ. ಆದರೆ, ಕೃತಿಯೊಂದು ಉಳಿದಿರುವುದು ಕೃತಿಯ ಮೂಲ ಸತ್ವದಿಂದ ಹೊರತು ಎಂದೂ ವಿಮರ್ಶೆಯನ್ನು ಅವಲಂಬಿಸಿ ಅಲ್ಲ.

ವಿಮರ್ಶೆಯೆಂಬ ಸಾಹಿತ್ಯ ಪ್ರಕಾರ ಹೆಚ್ಚು ಸಂಸ್ಕೃತಿ ನಿಷ್ಠವಾಗಿ ಕೃತಿಯ ಜೊತೆ ಪ್ರಾಮಾಣಿಕವಾಗಿ ಸಂಭಾಷಣೆ ನಡೆಸಿದರೆ ಹೆಚ್ಚು ಅರ್ಥಪೂರ್ಣವಾದೀತು.



ಇದಕ್ಕೆ ಇಂದಿನ ಕೆಲವು ಮಂದಿ ವಿಮರ್ಶಕರ ಬರವಣಿಗೆಗಳ ಮಾದರಿಗಳನ್ನು ಗುರುತಿಸಬಹುದು. ಅಂದರೆ ದೇಶೀಯ ಮಾನದಂಡಗಳನ್ನೆ ಕೃತಿಯ ಮೌಲ್ಯಮಾಪನದ ವೇಳೆ ಮುಖ್ಯವಾಗಿರಿಸಿಕೊಳ್ಳುವುದು, ಇದಕ್ಕೆ ಬಹುಸಂಸ್ಕೃತಿಯ ಪರಿಚಯದ ಅಗತ್ಯವಿದೆ. ವಿಭಿನ್ನ ಪ್ರದೇಶಗಳ ಸಾಂಸ್ಕೃತಿಕ, ಸಾಹಿತ್ಯಕ ಸನ್ನಿವೇಶಗಳ ಹಿನ್ನೆಲೆಯಿಂದ ಒಂದು ಸಂಸ್ಕೃತಿಯ ವ್ಯುತ್ಪತ್ತಿಯಾದ ಸಾಹಿತ್ಯ ಕೃತಿಯ ಮೌಲ್ಯಮಾಪನ ಆಗಬೇಕಾಗಿದೆ. ಆಗ ಮಾತ್ರ ಸಾಹಿತ್ಯ ವಿಮರ್ಶೆಗಳು ವರ್ತಮಾನದ ಸಾಂಸ್ಕೃತಿಕ ಇತಿಹಾಸದ ತುಣುಕುಗಳಾದಾವು.

ನಮ್ಮಲ್ಲಿ ಸಾಹಿತಿಗಳು. ಸಾಹಿತ್ಯಾಸಕ್ತರು ಯಾವತ್ತೂ ಅಲ್ಪಸಂಖ್ಯಾತರು. ರಾಜಕಾರಣಿಗಳು, ಕೃಷಿಕರು, ವ್ಯಾಪಾರಿಗಳು, ಕಾರ್ಮಿಕರು ಇವರೆಲ್ಲ ಬಹುಸಂಖ್ಯಾತರೇ ಆಗಿ ಉಳಿದಿರುವ ಸಂದರ್ಭದಲ್ಲಿ ಸಾಹಿತ್ಯಾಸಕ್ತರು ಮತ್ತು ಸಾಹಿತಿಗಳಿಗೆ ಯಾವುದೇ ಭಾಷಿಕ ಮೇರೆಗಳ ಅಗತ್ಯವಿಲ್ಲ. ಭಾಷೆ ಹಲವಿರಬಹುದು. ಹಲವು ದೇಶೀಯ ಸಂಸ್ಕೃತಿಗಳಿರಬಹುದು. ಆದರೆ ದೇಶೀಯ ಸಂಸ್ಕೃತಿಗಳಿಗೆ ಒಂದು ನಿರ್ದಿಷ್ಟ ಭಾಷೆಯ ಗೋಡೆ ಬೇಕಾಗಿಲ್ಲ. ಕೇರಳದ ಸಂಸ್ಕೃತಿ ಹಾಗೂ ಕರ್ನಾಟಕದ ಸಂಸ್ಕೃತಿಗಳು ಬೇರೆ ಬೇರೆ ಶಾಖೆಗಳಲ್ಲಿ ಭಾಷೆಗಳು ಅಲ್ಲ. ಒಂದೇ ಸಂಸ್ಕೃತಿಯ ವಿಭಿನ್ನ ಕೊಂಬೆಗಳು. ಈ ಹಲವು ಕೊಂಬೆಗಳಿಂದ ಬಿಟ್ಟ ಹೂವು, ಕಾಯಿ, ಹಣ್ಣುಗಳಾಗಿ ನಮ್ಮನ್ನು ತಲುಪುತ್ತವೆ. ನಮ್ಮ ನಮ್ಮ ಆಭರಣಗಳಿಗೆ ತಕ್ಕಂತೆ ಅವುಗಳನ್ನು ಅರಿತುಕೊಳ್ಳುವ ಅವಕಾಶವನ್ನು ನಮ್ಮ ಸಾಹಿತ್ಯಕ್ಷೇತ್ರ ಮಾಡಿಕೊಡಬೇಕಾಗಿದೆ.

ಸೌಜನ್ಯ: ಬಿತ್ತರ ಕನ್ನಡ ಭಾಷಾಭಿವೃದ್ಧಿ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ

ಕಮಾಲಾಪುರ–583221

---

## ವಚನ

ಶಿವನೇ, ನಿಮ್ಮ ನಾ ಬಲ್ಲೆನು. 'ಗುರುದೇವೋ ಮಹಾದೇವೋ' ಎಂದುದಾಗಿ ಶ್ರೀಗುರುರೂಪಾಗಿ ಬಂದು ದೀಕ್ಷೆಯ ಮಾಡಿ, ಶಿವಲಿಂಗವ ಬಿಜಯಂಗೆಯಿಸಿ ಕೊಟ್ಟಿರಿ, ಜಂಗಮವ ತೋರಿದಿರಿ. ಇದು ಕಾರಣ ನಿಮ್ಮ ನಾ ಬಲ್ಲೆನು ಎನ್ನ ನೀವೆ ಬಲ್ಲಿರಿ ನಿಮ್ಮ ಶಿಶುವೆಂದು ಪ್ರಸಾದವನಿಕ್ಕಿ ರಕ್ಷಿಸಿದಿರಿ. ಇದು ಕಾರಣದಿಂದಲಿ ನಿಮ್ಮ ನಾ ಬಲ್ಲೆನು. ಎನ್ನ ನೀವೇ ಬಲ್ಲಿರಿ. ಮತ್ತೆ ಮರೆ ಮಾಡಿ ಜ್ಞಾನವನು ಅಜ್ಞಾನವನು, ಭಕ್ತಿಯನು ಅಭಕ್ತಿಯನು, ಸುಖವನು ದುಃಖವನು ಒಡ್ಡಿ ಕಾಡದಿರಯ್ಯ. ಇವೆಲ್ಲವಕ್ಕೆಯು ನೀವೇ ಕಾರಣ. ಇದು ಕಾರಣ ನಿಮ್ಮ ಬೇರೆ ಬಲ್ಲವರಿಗೆ ಎಲೆಯ ತೋರಿ ಅಳಿವಾಡಿ ಕಾಡುವಿರಿ. ಕಾಡದಿರಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

–ಉರಿಲಿಂಗಪೆದ್ದಿ

# ಮಹಿಳೆ ಮೀಸಲಾತಿ ಹೆಸರಲ್ಲಿ

ಗುಡಿಬಂಡೆ ಪೂರ್ಣಿಮಾ, "ಮಾನಸ", ಗುಡಿಬಂಡೆ, ಕೋಲಾರ-ಜಿಲ್ಲೆ–561209.

ಹೆಣ್ಣು ಗಂಡಂತಹ ಜೀವಿಯಲ್ಲ. ಮಾನವ ಅಂಗಾಂಗಗಳನ್ನು ಹೊಂದಿಯೂ ಪ್ರತ್ಯೇಕ ಶರೀರ ರಚನೆ, ಸ್ವಭಾವ, ಪ್ರವೃತ್ತಿಗಳನ್ನು ಹೊಂದಿರುವಂಥ ಜೀವಿ. ಹೆಣ್ಣನ್ನು ಹೆಣ್ಣಾಗಿಯೇ ಅಧ್ಯಯನ ಮಾಡುವ, ಅಭ್ಯಾಸ ಮಾಡುವ ಪದ್ಧತಿ ಬೆಳೆದು ಬಂದಿಲ್ಲವಾದ್ದರಿಂದ ಅವಳ ಸ್ಪಷ್ಟ ಚಿತ್ರ ಲಭ್ಯವಿಲ್ಲ. ತಾನು ಸಮಾನಳೇ ಹೊರತು ನಿಕೃಷ್ಟಳಲ್ಲ ಎಂದು ತೋರ್ಪಡಿಸಲು ಹೆಣ್ಣು ಹೊರಟು, ಅದನ್ನು ಎಲ್ಲ ಆಯಾಮಗಳಲ್ಲೂ ಸಾಧಿಸಿ ತೋರಿಸಿದಾಗ, ಪುರುಷವರ್ಗ ಅದನ್ನು ಒಪ್ಪಬೇಕಾಯಿತು. ಸರಕಾರ ಮಾನ್ಯತೆ ಕೊಡಬೇಕಾಯಿತು.

ಈ ಹೋರಾಟ, ಸಾಧನೆ, ತಾನು ಜೀವಿಯಾಗಿ ಪುರುಷನಷ್ಟೆ ಸಮಾನಳು ಎಂದು ತೋರಿಸಲು ಮಾತ್ರವಾಗಿತ್ತು ಎಂಬುದನ್ನು ಮರೆತರು.

ಅಸ್ವಸ್ಥತೆ, ಅತೃಪ್ತಿ ಇರುವ ಹೆಣ್ಣು ಶೇಕಡ ಒಂದು. ಜಾಗತಿಕವಾಗಿ ಹೊರಟವರಲ್ಲಿ ಇಂಥ ಕೆಲವರು ಸ್ವಹಿತ ಸಾಧನೆಗಾಗಿ ಕೂಗಾಡಿದರು.

ಸೂಕ್ಷ್ಮಕ್ರಮದ ಕೆಲಸ ಹೆಣ್ಣು ಸಮರ್ಥವಾಗಿ ನಿರ್ವಹಿಸಬಲ್ಲ ಹಾಗೆ ಸ್ಥೂಲ ಶ್ರಮ ಕ್ಷೇತ್ರ ಗಂಡು ನಿರ್ವಹಿಸಬಲ್ಲುದು, ಎರಡು ವರ್ಗದ ಕಾರ್ಯಕ್ಷೇತ್ರಗಳೇ ವಿಭಿನ್ನ, ಶರೀರ ರಚನೆ ಮತ್ತು ಕಾರ್ಯಗಳಂತೆಯೇ.

ಇಂದು ಅಧಿಕಾರದ ಉನ್ನತಸ್ಥಾನಗಳಲ್ಲಿ ಇರುವ ಮಹಿಳೆಯರು ಲೈಂಗಿಕವಾಗಿ ಬೌದ್ಧಿಕವಾಗಿ, ಸಾಮಾಜಿಕವಾಗಿ ಹಿಂಸೆಗೆ ಒಳಪಡುತ್ತಿರುವುದಕ್ಕೆ ವಿಪುಲವಾದ ಉದಾಹರಣೆಗಳಿವೆ. ಸಮಾನತೆಯ ಹೆಸರಿನಲ್ಲಿ ಮತ್ತಷ್ಟು ಶೋಷಣೆಗೆ ಗುರಿ ಮಾಡುವ ಹಣ್ಣಿಕೆ ಮೀಸಲಾತಿ.

ಆಕರ್ಷಣೀಯ ಬಲೆ ಒಡ್ಡಿ ಹೆಣ್ಣನ್ನು ಅನಗತ್ಯವಾಗಿ ಬಜಾರಿಗೆ ತರುವ ಈರೀತಿ ಅವಳನ್ನು ಬಳಸಿಕೊಂಡು ಶಾರೀರಕವಾಗಿ ಮಾನಸಿಕವಾಗಿ ದುರ್ಬಲಗೊಳಿಸುತ್ತ ಇದೆಲ್ಲ ಮಹಿಳೆಯರ ಅಭ್ಯುದಯಕ್ಕೆ ಎನ್ನುವುದು ವ್ಯಂಗ್ಯ ಅಲ್ಲದೆ ವಿನಾಶಕ್ಕೆ ನಾಂದಿಯೂ ಕೂಡ. ಮಹಿಳೆಯೇ ಪ್ರಧಾನ ಮಂತ್ರಿಯಾದ ಅವಧಿಗಳಲ್ಲೂ, ಆಯಾ ದೇಶಗಳಲ್ಲಿ ಮಹಿಳೆಯರ ಸಮಸ್ಯೆಗಳು ಬಿಡುಗಡೆ ಕಂಡಿಲ್ಲ.



ಮೀಸಲಾತಿ ಇಲ್ಲದ ದಿನಗಳಲ್ಲೂ ಇಷ್ಟು ಅನುಕೂಲ, ಅವಕಾಶಗಳನ್ನು ಬಳಸಿಕೊಂಡು ಮಹಿಳೆಯರು ಮುಂದುವರೆದದ್ದು, ಅಧಿಕಾರ ಪ್ರಾಪ್ತಮಾಡಿಕೊಂಡ್ಡದ್ದು ಇದೆ. ಈಗ ಮಹಿಳೆ ಮಹಿಳೆಯರ ನಡುವೆ ಸ್ಪರ್ಧೆ ಇರಿಸಿ ಹೋರಾಡಿ ಗೆಲ್ಲುವ ಚಾಕ ಚಾಕ್ಯತೆಯ ಪಂದ್ಯ ಇಟ್ಟರೆ, ಜಯಿಸಿದ ಮಹಿಳೆಯಿಂದ (ಮತ್ತೊಬ್ಬ ಮಹಿಳೆಯನ್ನೇ ತುಳಿದು) ಮಹಿಳೆಯರ ಸಮಸ್ಯೆ ಬಗೆ ಹರಿಯುವುದೆ?.

ಹೆಣ್ಣಿನ ಬಗೆಗೆ ನಿಜವಾದ ಕಳಕಳಿ ಇರುವುದೇ ಆದಲ್ಲ ಅವರನ್ನು. ಅಗತ್ಯ ಇರುವ ಕಡೆಗಳಲ್ಲಿ ನಾಮಕರಣದ ಮುಖಾಂತರ ಅಧಿಕಾರ ಕಕ್ಷೆಗೆ ತರಬೇಕು. ಮತದಾನದ ಹಕ್ಕು ವರ್ಜಿಸಿ, ಅಭಿವೃದ್ಧಿ, ಸೂತ್ರ ರೂಢಿಸುವ ಹೊಣೆಗಾರಿಕೆ ನೀಡಿದಾಗ, ಮಹಿಳೆಯ ನೈಪುಣ್ಯತೆ, ಕೌಶಲ ಸೂಕ್ಷ್ಮತೆ, ಅಭಿವ್ಯಕ್ತಗೊಳ್ಳುತ್ತದೆ. ಮಹಿಳಾಸಂಪತ್ತಿನ ಸಾರ್ಥಕ ಪ್ರಯೋಜನವೂ ದೊರೆಯುತ್ತದೆ. ಇದು ಮಹಿಳೆಯರ ಬಗೆಗೆ ಸರ್ಕಾರಕ್ಕೆ ಆಸಕ್ತಿ ಇದೆ ಎನ್ನುವ ಗುರುತೇ ಹೊರತು, ಅವರಿಗೂ ಒಂದು ಯುದ್ಧರಂಗ ಕಲ್ಪಿಸಿ ಕೊಡುವುದಲ್ಲ. ಮಹಿಳೆಯ ಕುಟುಂಬನಾಶಕ್ಕೆ ನಾಂದಿಯಾಗುವಂಥ ಯಾವ ಹೊಣೆಯೂ ಅವಳಿಗೆ ಇರಬಾರದು. ಆ ಮೂಲಕ ಅವರ ನೆಲೆ ತಪ್ಪಿಸುವ ಕ್ರಮ ಸರಿಯಲ್ಲ.

ಒಂಟಿಯಾಗಿ ಸಂಚಾರ, ವಾಸ್ತವ್ಯ ಎರಡೂ ನಮ್ಮ ದೇಶದ ಮಹಿಳೆ ಸುಸೂತ್ರವಾಗಿಲ್ಲ. ಇಂಥಸ್ಥಿತಿಯಲ್ಲಿ ಹಿಂಸೆ ಕೊಡಬಾರದು. ಹೆಣ್ಣು, ಚುನಾವಣೆಗೆ ನಿಲ್ಲಬಾರದು. ವಾತ ಚಲಾಯಿಸಬಾರದು ಎಂಬ ನಿಯಮಗಳು ನಮ್ಮ ದೇಶದಲ್ಲಿ ಇಲ್ಲದೆ ಇರುವುದರಿಂದ ಅಭೀಪ್ಸೆ, ಶಕ್ತಿ, ಯುಕ್ತಿ ಇದ್ದವರು ನಿಲ್ಲಲು, ಗೆಲ್ಲಲು, ಅಧಿಕಾರ ಪ್ರಾಪ್ತ ಮಾಡಿಕೊಳ್ಳಲು ಅವಕಾಶ ಇದ್ದೇ ಇದೆ. ಹಾಗೆ ಮಾಡಿಕೊಳ್ಳುತ್ತಲೂ ಇದ್ದಾರೆ.

ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಮನೆಯಿಂದ ಹೊರಬರುವ ಜಾದೂಒಡ್ಡಿ, ಅ ಬಲೆಗೆ ಬಿದ್ದವರನ್ನು ಬಳಸಿಕೊಂಡು, ಮೂಲನೆಲೆ ತಪ್ಪಿಸಿ, ಕುಟುಂಬ ಹಿತ, ದೇಶಹಿತ, ಮಕ್ಕಳ, ವೃದ್ಧರ ಹಿತಗಳನ್ನೂ ಈ ಮೂಲಕ ಬಲಿಕೊಡುವ ಯೋಜನೆಗಳು ಆಸಕ್ತಿ, ಕಳಕಳಿ, ಇರುವಂಥವರು ಮಾಡಬಾರದು, ಪ್ರಚೋದಿಸಬಾರದು.

ಸೌಜನ್ಯ : ಬಿತ್ತರ ಕನ್ನಡ ಭಾಷಾಭಿವೃದ್ಧಿ ವಿಭಾಗ ಕ, ವಿ. ಹಂಪಿ.

# ಅಂತರಂಗದ ಹೊಳಪು ಸಂಸ್ಕೃತಿ

ರಾಜಶೇಖರ ಜಮದಂಡಿ, ಎಂ.ಫಿಲ್. ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ-583 221

ಸಂಸ್ಕೃತಿ ಎಂಬುದು ಕೇವಲ ಪಾಂಡಿತ್ಯ ಪುರ್ಣವಾದ ಜ್ಞಾನದ ಆಗರವಲ್ಲ ವಿವೇಕಕ್ಕೆ ಮಾತ್ರ ಸಂಬಂಧಿಸಿರುತ್ತದೆ. ವಿದ್ಯೆ ಬುದ್ಧಿಗಳ ಸಮಿಶ್ರಣದೊಡನೆ ಅಂತರಂಗಿಕವಾಗಿ ಅರಳುವಂಥಾದ್ದು. ಅಲ್ಲದೆ ವೇಷ ಭೂಷಣಗಳಿಂದ ಗುರುತಿಸುವಂತದ್ದಲ್ಲ. ಒಂದು ದೇಶದ ಇತಿಹಾಸವನ್ನು ಅವಲೋಕಿಸುವಾಗ ಅಲ್ಲಿನ ಬದುಕಿನ ರೀತಿ ನೀತಿಗಳು ಅನುಸರಿಸುವ ಧರ್ಮ ಕಟ್ಟಿಕೊಂಡಿರುವ ಕಲೆ ಜೀವನ ಹೋರಾಟದಲ್ಲಿ ಎದುರಿಸುತ್ತಿರುವ ಸಮಸ್ಯೆಗಳು ಮತ್ತು ಮೌಲ್ಯಗಳು ಇತ್ಯಾದಿ ಸವಿವರಣೆಯೆಲ್ಲಾ ಮನುಷ್ಯನ ಸಂಸ್ಕೃತಿಗೆ ಕೈಗನ್ನಡಿಯಾಗಬಹುದು. ಇಂದಿನ ವೈಜ್ಞಾನಿಕ ಯುಗದಲ್ಲಿ ರೀತಿ, ನೀತಿ, ಕಲೆ, ಧರ್ಮ ಎಲ್ಲವೂ ವಿರೋಧಾಭಾಸವಾಗಿ ಮಾರ್ಪಾಡಾಗುತ್ತಿವೆ.

ಸಂಸ್ಕೃತಿ ಎಂದರೇನು ? ಎಂದುಕೊಂಡಾಗ ಇದು ಶಬ್ದ ಸೀಮಿತವಲ್ಲ ಇದರರ್ಥ ಬಹುಮುಖವಾದುದು. ನಾನಾ ದೃಷ್ಟಿಕೋನಗಳಲ್ಲಿ ವಿಚಾರ ಮಾಡುವಂಥಾದ್ದು. ಇಂಗ್ಲಿಷಿನಲ್ಲಿ 'ಕಲ್ಚರ್' ಎಂಬುದರಿಂದ ಸಂವಾದಿಯಾಗಿ ಕನ್ನಡದಲ್ಲಿ ಸಂಸ್ಕೃತಿ ಎಂದು ಬಳಸುತ್ತಿದ್ದೇವೆ. ನೂರೈವತ್ತು ವರ್ಷಗಳಿಂದೀಚೆಗೆ ಈ ಶಬ್ದ ರೂಢಿಗೆ ಬಂದಿಗೆ. ಅಂದರೆ ಗೌರವಿಸು, ಆರಾಧಿಸು, ಸೇವೆ ಮಾಡು, ತಲೆಬಾಗು ಎಂಬುದಾಗಿ ಅರ್ಥಗಳನ್ನೊಳಗೊಂಡಿದೆ. ಇನ್ನು ಕೃಷಿಗೆ ಸಂಬಂಧಪಟ್ಟಂತೆ ಅಗ್ರಿಕಲ್ಚರ್ ಎನ್ನುತ್ತೇವೆ. ಈ ಅಗ್ರಿಕಲ್ಚರ್ ಕೂಡ ವ್ಯವಸಾಯವಿದ್ದಂತೆ ಭೂಮಿಯಲ್ಲಿ ಉತ್ತಿ, ಬಿತ್ತಿ, ಹಸನಮಾಡಿ ಉತ್ತಮ ಬೆಳೆ ಪಡೆಯುವಂತೆ ಮನುಷ್ಯನ ಅಂತರಂಗದಲ್ಲಿಯೂ ವಿಶೇಷ ಸಂಸ್ಕಾರ ದೊರಕಿದಾಗ ಉತ್ತಮ ಸಂಸ್ಕೃತಿ ಮೊಳಕೆಯೊಡೆಯಬಹುದು.

ಪ್ರಾಣಿ-ಪಕ್ಷಿಗಳಿಗಿಂತ ಈ ಮನುಷ್ಯಪ್ರಾಣಿ ಸ್ವಲ್ಪ ಭಿನ್ನ. ಅವುಗಳಿಗೆ ಸರಿಯಾದ ತಿಳುವಳಿಕೆಯಿಲ್ಲ, ಸಾಮಾಜಿಕ ಒಕ್ಕೂಟವಿಲ್ಲ' ವಾಕ್ ಶಕ್ತಿಯಿಲ್ಲ. ವೈಚಾರಿಕ ಪ್ರಜ್ಞೆಯಿಲ್ಲ. ಇವೆಲ್ಲಾ ಮನಷ್ಯ ಪ್ರಾಣಿಗಳಿಂದ ಬೇರ್ಪಡಿಸಿ ಒಂದು ಮಾತಿನಲ್ಲಿ ಹೇಳುವುದಾದರೆ ಅದನ್ನೆ (ಸಂಸ್ಕೃತಿ) ಸುಸಂಸ್ಕೃತನು ಎನ್ನಬಹುದು. ಅಂದರೆ ಮೃಗತ್ವವನ್ನು ಹೋಗಲಾಡಿಸಿಕೊಂಡು ಮಾನವೀಯತೆ ಗುಣಗಳನ್ನಳವಡಿಸಿಕೊಳ್ಳುವುದೇ ಸಂಸ್ಕೃತಿ. ಆಲೋಚನೆಗಳು, ಉಕ್ತಿಗಳು, ಭಾವನೆಗಳು, ಮತ್ತೊಂದೆಡೆ ಬೆಳಕು ಪಸರಿಸುವಂತಾಗಬೇಕು. ಇದು ಅಂತರಂಗಿಕವಾದ, ಆತ್ಮಸಂಬಂಧಿಯಾದ ಕ್ರಿಯೆ. ಇದು ಹೃದಯದ ಒಲವು, ಬುದ್ಧಿಯ ಬೆಳಕು ಎಂಬೆರಡು ಮಾತುಗಳಿಂದ ನಿರ್ದೇಶಿಸಬಹುದು. ಜೀವನದ ನಾನಾ ಧ್ಯೇಯಗಳ ನಾನಾ ತತ್ತ್ವಗಳ ನಾನಾ ಧರ್ಮಗಳಮೌಲ್ಯಗಳ ತಾರತಮ್ಯ ಜ್ಞಾನದಿಂದಾಗಿ ಸಮನ್ವಯ ಸ್ವಾರಸ್ಯ ಅದೊಂದೇ ವಿನಯ ಮರ್ಯಾದೆ ಮತ್ತು ಪಾಂಡಿತ್ಯವಲ್ಲ. ತಿಳುವಳಿಕೆಯೊಂದೇ ಅಲ್ಲ ತರ್ಕವಲ್ಲ. ಅಲ್ಲದೆ ನೂರಾರು ಗ್ರಂಥಗಳ ವ್ಯಾಕರಣ ಹತ್ತಾರು ದೇಶಗಳ ಸುತ್ತಾಟ, ಜನರೊಡನಿಟ್ಟುಕೊಂಡ ಸಂಬಂಧ ಕಾರ್ಯನಿರ್ವಹಣೆಯಲ್ಲಿನ ಜಾಗರೂಕತೆ ಉಪಾಯ, ತಂತ್ರ ಜಯಸಾಧನೆ ಇತ್ಯಾದಿಗಳಿಂದಷ್ಟೇ ಮತ್ತು ಇವೆಲ್ಲಾ ಗುಣಗಳಿದ್ದರೇನೇ ಸಂಸ್ಕೃತಿಯಲ್ಲ.



ಇವೆಲ್ಲವುದರ ಜೊತೆಗೆ ಜೀವನದ ಸಂಬಂಧಗಳ ಯುಕ್ತಾ ಯುಕ್ತ ವಿವೇಚನೆ ಧರ್ಮ್ಮ ಚಿಂತನೆ ಆತ್ಮ ಸಂಶೋಧನೆ, ಆತ್ಮಸಂಯಮ, ಸಮಸ್ತಿಯ ದೃಷ್ಟಿ, ಸಭ್ಯತೆ ಯೋಗ್ಯವಾದ ಕಾರ್ಯನೀತಿ ಈ ಎಲ್ಲಾ ಸಮಾವೇಶದ ವಿವೇಕವೇ ಸಂಸ್ಕೃತಿ. ಅನಾದಿ ಕಾಲದಿಂದ ನಾಗರಿಕತೆ ಮತ್ತು ಸಂಸ್ಕೃತಿಗಳ ಅರ್ಥ ವಿಶೇಷವಾಗಿ ಕಂಡುಕೊಂಡಿಲ್ಲವೆಂಬುದನ್ನು ಸೂಕ್ಷ್ಮವಾಗಿ ಗಮನಿಸಬಹುದು. ಹಿಂದೆ ದೇಹವಷ್ಟೇ ಮುಚ್ಚಿಕೊಳ್ಳಲು ಮರದ ಎಲೆ ಪ್ರಾಣಿಚರ್ಮ ಬಳಸುತ್ತಿದ್ದ. ನಂತರ ನೇಯ್ಗೆಯ ಬಟ್ಟೆ ಸುತ್ತಿಕೊಳ್ಳಲಾರಂಭಿಸಿದ ಹಸಿಮಾಂಸ ತಿನ್ನುವುದು ಬಿಟ್ಟ. ಬೇಯಿಸಿ ತಿನ್ನಲಾರಂಭಿಸಿದ. ಗುಹೆಗಳಿಂದ ಮನೆಗಳಲ್ಲಿ ವಾಸಿಸುವುದು ಕಲಿತ. ಹಾಗೆಯೇ ಬೀಜ ಬಿತ್ತಿ ಕಾಳನ್ನು ಬೆಳೆದ ತಿನ್ನುವುದು ಕಲಿತ ನಂತರ ಮೂಕಾಭಿನಯದಿಂದ ಒಂದು ಹೆಜ್ಜೆ ಮುಂದೆ ಬಂದು ಭಾವಾಭಿನಯಗಳಲ್ಲದೆ ಮಾತುಗಳ ಮೂಲಕ ವ್ಯಕ್ತಪಡಿಸಿದ. ಅಂತರಂಗದ ಹಸಿವಿನ ಜೊತೆಗೆ ಬಾಹ್ಯದ ಆಸೆಗಳನ್ನು ತೃಪ್ತಿಪಡಿಸಿಕೊಳ್ಳತೊಡಗಿದೆ. ಇದೆಲ್ಲಾ ಕಾಲದಿಂದ ಕಾಲಕ್ಕೆ ಬೆಳವಣಿಗೆ ಸೂಚಿಸುತ್ತದೆ.

ಮನುಷ್ಯ ತನ್ನ ನಡೆತೆಯನ್ನು ತಿದ್ದಿಕೊಳ್ಳುವುದರ ಜೊತೆಗೆ ಬೇಕು-ಬೇಡಗಳ ಆಕಾಂಕ್ಷೆಗಳಲ್ಲಿ ಒಳ್ಳೆಯದನ್ನೇ ಶೋಧಿಸತೊಡಗಿದ. ಇವೆಲ್ಲದರಿಂದ ಪ್ರಚೋದಿತವಾದ ಮನಸ್ಸು ಸೌಂದರ್ಯಾಕಾಂಕ್ಷೆಗೆ ಒಳಗಾಯಿತು. ಮನುಷ್ಯ ಸ್ವಭಾವಕ್ಕೆ ಸೌಂದರ್ಯವನ್ನು ಬೆಲೆಯನ್ನೂ ಕೊಡುವ ಎಲ್ಲ ಶಕ್ತಿಗಳ ಸುಸಂಗತ ವಿವೇಕವೇ ಸಂಸ್ಕೃತಿ ಎಂದು ಡಿ. ವಿ. ಜಿ. ಯವರು ವ್ಯಕ್ತಪಡಿಸಿದ್ದಾರೆ. ಸೌಂದರ್ಯ ಹೇಗಿರುತ್ತದೆ ? ಎಂದಾಗ ಗಾಂಧೀಜಿಯ ಬಡಕಲು ಶರೀರ, ಸಾಕ್ರೇಟಿಸಿನ ವಿಕೃತಿಬುದ್ಧಿ, ಬಡತನದ ಅಂಬೇಡ್ಕರ್, ವಸ್ತ್ರಹೀನ ಬಾಹುಬಲಿ, ದೇಹದಂಡಿಸುವ ರಾಮಕೃಷ್ಣ ಪರಮಹಂಸ ಮುಂತಾದವರಲ್ಲಿ ಸೌಂದರ್ಯ ಹುಡುಕುವುದು ಕಷ್ಟ. ಆದರೆ ಅವರ ಸಾಧನೆಯಲ್ಲಿ ಸೌಂದರ್ಯ ಹೊಳೆಯುತ್ತಿರುತ್ತದೆ. ಪ್ರದೇಶದಂದ ಪ್ರದೇಶಕ್ಕೆ ವಾಸಮಾಡುವ ಜನರ ಜೀವನ ಮಟ್ಟ ಭಿನ್ನವಾಗಿರುತ್ತದೆ. ಈ ಆಧಾರದ ಮೇಲೆ ಸಂಸ್ಕೃತಿಯೂ ಭಿನ್ನವಾಗುತ್ತದೆ ದಿ. ಎಸ್ ಎಲಿಯಟ್ ಸಂಸ್ಕೃತಿ ಕೇವಲ ಒಬ್ಬ ವ್ಯಕ್ತಿಗೆ ಸೀಮಿತವಲ್ಲ

ಸಮಾಜಕ್ಕೆ ಸಂಬಂಧಿಸಿದ್ದು ಎಲ್ಲಾ ಪ್ರತಿಕ್ರಿಯೆಗಳ ಅಭಿರುಚಿಯನ್ನೊಳಗೊಂಡಿರುತ್ತದೆ ಎನ್ನುತ್ತಾನೆ.

ಮಾಥ್ಯೂ ಅರ್ನಾಲ್ಡ್ ರವರು ವೈಜ್ಞಾನಿಕತೆಯು ಸಂಸ್ಕೃತಿಯ ಉಗಮಸ್ಥಾನವಿಲ್ಲ. ವಿಜ್ಞಾನ ಬೌದ್ಧಿಕ ಶಕ್ತಿಯನ್ನು ನೀಡುವುದರ ಜೊತೆಗೆ ಸಹೃದಯತ್ವದ ಪರಿಪಕ್ವತೆಗೆ ಸಹಕಾರಿಯಾಗಬೇಕು ಅದು ಸಂಸ್ಕೃತಿ ಎನಿಸಿಕೊಳ್ಳುತ್ತದೆ ಎಂದು ಹೇಳಿರುವರು.

ಸಮಷ್ಟಿ ಜೀವನದ ಅಂತರಂಗಕ್ಕೆ ಸಹಾಯಕವಾದ ಉತ್ತಮ ಸಾಮಗ್ರಿಗಳಿಂದ ವ್ಯಷ್ಟಿ ಜೀವನದ ವಿಕಾಸಕ್ಕೆ ಪೂರಕವಾದ ಸಂಸ್ಕಾರಕ್ಕೂ 'ಸಂಸ್ಕೃತಿ' ಶಬ್ದವನ್ನು ಬಳಸುತ್ತೇವೆ. ವಿಜ್ಞಾನಕ್ಕೆ ಚಕ್ರವಿದ್ದಂತೆ ಅರ್ಥಶಾಸ್ತ್ರಕ್ಕೆ ಹಣವಿದ್ದಂತೆ ರಾಜಕೀಯಕ್ಕೆ ಓದುಮಿದ್ದಂತ, ಮನುಷ್ಯನ ಬದುಕಿಗೆ ಸಂಸ್ಕೃತಿ ಇರಲೇಬೇಕು.

ಸೌಜನ್ಯ : ಬಿತ್ತರ ಕನ್ನಡ ಭಾಷಾಭಿವೃದ್ಧಿ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ, ಕುಮಲಾಪುರ-583221.





# ಭಾರತೀಯ ಕೃಷಿ ಸಂಶೋಧನ ಮಾಲಿಕೆ

ಜಿ.ಆರ್. ರಂಗಸ್ವಾಮಯ್ಯ, ಭಾರತೀಯ ಕೃಷಿ ಸಂಶೋಧನ ಸಂಸ್ಥೆ, ಕೃಷಿಭವನ, ಪೂಸಾ, ಹೊಸದೆಹಲಿ-110012.

## 1. ಬೀಜದ ನೆಲಗಡಲೆಕಾಯಿ ಶೇಖರಿಸುವ ಅಗ್ಗದ ವಿಧಾನ

ಮುಂದಿನ ಬೆಳೆಗಾಗಿ ಬೀಜದ ನೆಲಗಡಲೆ ಕಾಯಿಯನ್ನು ರೈತರೆ ಕೆಡದಂತೆ ಶೇಖರಿಸಿಡಲು ಅಗ್ಗದ ಸುಲಭ ವಿಧಾನವೊಂದು ಇದೆ. ಈ ವಿಧಾನ ತಲೆ-ತಲಾಂತರದಿಂದಲೂ ನಮ್ಮ ಹಿರಿಯರು ಅನುಸರಿಸಿಕೊಂಡು ಬಂದದ್ದೇ ಆಗಿದೆ. ತೊಗರಿ ಹಾಗೂ ಅವರೆ ಕಾಳುಗಳನ್ನು ಮುಂದಿನ ವರ್ಷದವರೆಗೂ ಸಂಗ್ರಹಿಸಿಡಲು ನಮ್ಮ ಹಿರಿಯರು ಬೂದಿಯನ್ನು ನೀರಿನಲ್ಲಿ ಕಲಸಿ ಕಾಳುಗಳಿಗೆ ಹತ್ತಿಕೊಳ್ಳುವಂತೆ ಬೆರೆಸಿ ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ನೆಲ್ಲುಹುಲ್ಲಿನ ಹಗ್ಗದಿಂದ ಮಾಡಿದ ಪೆಂಡಿಗಳಲ್ಲಿ ಸುತ್ತಿ ಇಡುತ್ತಿದ್ದರು. ಇದೇ ವಿಧಾನವನ್ನೇ ನೆಲಗಡಲೆಯನ್ನು ಬೀಜಕ್ಕಾಗಿ ಸಂಗ್ರಹಿಸಿಡಲು ಬಳಸಬಹುದಾಗಿದೆ.

ಒಂದು ಹೆಕ್ಟೇರು ಜಮೀನಿಗೆ 100 ರಿಂದ 150 ಕಿಲೋ ಬೀಜದ ಕಡಲೆಬೀಜ ಬೇಕಾಗುತ್ತದೆ. ಬೀಜದ ಕಡಲೆಕಾಯಿ (ಶೇಂಗಾ)ಗೆ ದುಬಾರಿಬೆಲೆ ತೆರಬೇಕಾಗುತ್ತದೆ. ಏಕೆಂದರೆ ರೈತರು ಇವನ್ನು ಮನೆಯಲ್ಲೇ ಕೆಡದಂತಿಡುವುದು ಕಷ್ಟ. ಇವು ಬೂಷ್ಟು ಹಿಡಿದು ಅಥವಾ ಹುಳು ಕೊರೆದು ಹಾಳಾಗುವ ಸಾಧ್ಯತೆ ಹೆಚ್ಚು. ಅದಕ್ಕಾಗಿ ಪರಿಹಾರವೂ ಇಲ್ಲದಿಲ್ಲ.

ಚೆನ್ನಾಗಿ ಬಲಿತ ನೆಲಗಡಲೆ ಕಾಯಿಗಳನ್ನು ಆರಿಸಿ ಒಣಗಿಸಿ ಬೂದಿ/ಧೂಳು ಬೆರಸಿ ಪಾಲಿಥಿನ್ ಚೀಲಗಳಲ್ಲಿ ಕೆಡದಂತಿಡಬಹುದು. ಒಂದು ಕಿಲೋ ಕಡಲೆಕಾಯಿ ಅಥವಾ ಬೀಜಕ್ಕೆ 4 ಗ್ರಾಂ ಧೂಳು/ಬೂದಿ ಬೆರೆಸಿ ಪಾಲಿಥಿನ್ ಚೀಲದಲ್ಲಿ ಚೆನ್ನಾಗಿ ಕುಲುಕಿ (ಕೆಲವು ನಿಮಿಷಗಳವರೆಗೆ) ಇಡಬೇಕು. ಈ ಧೂಳು/ಬೂದಿ ಕಾಯಿ/ಬೀಜದ ಸುತ್ತ ರಕ್ಷಾ ಕವಚವನ್ನು ನೀಡುತ್ತದೆ.

ಥೀರಮ್ ಅಥವಾ ಕಪ್ತಾನ್ ಮದ್ದನ್ನು 1 ಕಿಲೋ ಬೀಜಕ್ಕೆ 2ಗ್ರಾಂನಂತೆ ಬೆರೆಸಿ ಸಂಗ್ರಹಿಸಿಡಬಹುದಾದರೂ ಈ ಬೀಜಗಳನ್ನು ತಿನ್ನಲು ಬರುವುದಿಲ್ಲ. ಬೂದಿ/ಧೂಳು ಉಚಿತವಾಗಿ ಸಿಗುವುದರಿಂದ, ಇವು ಪ್ರದೂಷಣೆಯಿಂದ ಮುಕ್ತವಾಗಿರುವುದರಿಂದ ಹಾಗೂ ಇದು ಸರಳ ವಿಧಾನವಾಗಿರುವುದರಿಂದ ರೈತರಿಗೆ ಅನುಕೂಲ. ಕರ್ನಾಟಕದಲ್ಲಿ ನೀರಾವರಿ ಹಾಗೂ ಮಳೆಯಾಶ್ರಯದಲ್ಲಿ ಸುಮಾರು 24 ಲಕ್ಷ ಹೆಕ್ಟೇರುಗಳಲ್ಲಿ ನೆಲಗಡಲೆ (ಶೇಂಗಾ) ಬೆಳೆಯಲಾಗುತ್ತಿದೆ. ನೀರಾವರಿ ಬೆಳೆಯಿಂದ ಉತ್ತಮ ಇಳುವರಿ ಬರುತ್ತಿದೆ. ಖರ್ಚಿನ ದೃಷ್ಟಿಯಿಂದ ನೋಡಿದರೆ ಸಣ್ಣ ರೈತರ ಕೈಗೆಟಕುವಂಥ ಲಾಭದಾಯಕ ಬೆಳೆ ಇದಾಗಿದೆ. ಬೀಜದ ಕಡಲೇಕಾಯಿ/ಬೀಜಕ್ಕೆ ಬಿತ್ತನೆ ಕಾಲದಲ್ಲಿ ದುಬಾರಿ ಬೆಲೆ ತೆರುವ ಬದಲು ಈ ಸರಳ ಹಾಗೂ ಅಗ್ಗದ ವಿಧಾನದಿಂದ ಬಿತ್ತನೆಗೆ ಬೇಕಾದ ಕಾಯಿ/ಬೀಜವನ್ನು ರೈತರೇ ಸಂಗ್ರಹಿಸಿಡಬಹುದು.

## 2. ಪೂಸಾ 834 – ಬೇಗ ಕುಯ್ಲಿಗೆ ಬರುವ ಭತ್ತದ ತಳಿ

ಪೂಸಾ–834 ಎಂಬ ಅಧಿಕ ಇಳುವರಿಯ, ಮಧ್ಯಮ ಎತ್ತರದ, ಬೇಗ ಕುಯ್ಲಿಗೆ ಬರುವ ಭತ್ತದ ತಳಿಯನ್ನು ಕರ್ನಾಟಕ, ಆಂಧ್ರಪ್ರದೇಶ ಹಾಗೂ ಪೂರ್ವ ಉತ್ತರ ಪ್ರದೇಶಗಳಿಗಾಗಿ ಬಿಡುಗಡೆ ಮಾಡಲಾಗಿದೆ. ಇದು ಪಣಜಿ (ನೇರಬಿತ್ತನೆ) ಹಾಗೂ ನಾಟಿ ಬೆಳೆ- ಎರಡೂ ಕೃಷಿ ಪದ್ಧತಿಗಳಲ್ಲೂ ಉತ್ತಮ ಇಳುವರಿ ಸಾಮರ್ಥ್ಯ ಹೊಂದಿರುವುದು. ಈ ತಳಿ ಹೆ/7.5. ಟನ್‌ವರೆಗೂ ಇಳುವರಿ ನೀಡಬಲ್ಲದು. ಸತುವನ್ನು ಸಮರ್ಥ ರೀತಿಯಲ್ಲಿ ಬಳಸಿಕೊಳ್ಳುವ ಸಾಮರ್ಥ್ಯ ಹೊಂದಿರುವ ಈ ತಳಿ ಮುಂಚಿತವಾಗಿ ಹಾಗೂ ತಡವಾಗಿ ಬಿತ್ತನೆ ಮಾಡಿದಾಗಲೂ ಚೆನ್ನಾಗಿ ಹೊಂದಿಕೊಂಡು ಉತ್ತಮ ಇಳುವರಿ ನೀಡಬಲ್ಲದು. ಬೆಂಕಿ ರೋಗ, ತೆನೆಸುಳಿ ಒಣಗುವ ರೋಗ, ಕಂದು ಚುಕ್ಕೆ ರೋಗ, ಹಾಗೂ ತುಂಗ್ರೋ ಸಿಲೀಂದ್ರ ರೋಗಗಳಿಗೆ ನಿರೋಧಕತೆ ಪಡೆದಿರುವ ಈ ತಳಿ ಕಾಂಡ ಕೊರೆಯುವ ಹುಳು, ಗರಿ ಸುರುಳಿಸುತ್ತುವ ರೋಗ ಹಾಗೂ ಗಂಟುಗಳನ್ನುಂಟು ಮಾಡುವ ಕ್ರಿಮಿಗಳ ಹಾವಳಿಯನ್ನು ಸಾಧಾರಣವಾಗಿ ತಡೆದುಕೊಳ್ಳುವ ಶಕ್ತಿಯನ್ನು ಹೊಂದಿದೆ.

## 3. ಮಾವಿನ ಹೊಸ ಸಂಕರ ತಳಿಗಳು

ಬೆಂಗಳೂರಿನ ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆಯು ನಾಲ್ಕು ಹೊಸ ಮಾವಿನ ಸಂಕರ ತಳಿಗಳನ್ನು ರೂಪಿಸಿದೆ. (i) 'ಅರ್ಕಾ ಅರುಣ' ತಳಿಯನ್ನು ಬಂಗನಪಲ್ಲ ಹಾಗೂ ಅಲ್ಫಾಂಸೋ ತಳಿಗಳನ್ನು ಬಳಸಿಕೊಂಡು ರೂಪಿಸಲಾಗಿದೆ. ಈ ತಳಿಯ ಹಣ್ಣು ಸರಾಸರಿ 800ಗ್ರಾಂ ತೂಗುತ್ತದೆ; ಹೆ/20. 4 ಟನ್ ಇಳುವರಿ ನೀಡಬಲ್ಲದು. ಹೆ./8(0 ಸಸಿಗಳನ್ನು ನೆಡಬಹುದು. (ii) "ಅರ್ಕಾ ಪ್ರನೀತ್" ತಳಿಯ ಹಣ್ಣು ಸರಾಸರಿ-225 ಗ್ರಾಂ ತೂಗುತ್ತದೆ. ತಿರುಳು ಗಟ್ಟಿಯಾಗಿದ್ದು, ರುಚಿಕರ, ನಾರು ರಹಿತ ಹಾಗೂ ಕಡುಕಿತ್ತಳೆ ಬಣ್ಣಕ್ಕಿರುತ್ತದೆ. ಹೆ./10-12ಟನ್ ಇಳುವರಿ ನೀಡಬಲ್ಲದು. (iii) 'ಅರ್ಕಾ ಅನಮೋಲ್' ತಳಿಯನ್ನು ಅಲ್ಫಾಂಸೋ ಮತ್ತು ಜನಾರ್ಧನ ಪಸಂದ್ ತಳಿಗಳಿಂದ ರೂಪಿಸಿದೆ. ಹಣ್ಣು ಸರಾಸರಿ 200ಗ್ರಾಂ ತೂಗುತ್ತದೆ. ತಿರುಳು ನಾರು ರಹಿತ, ತುಂಬಾ ರುಚಿಯಾಗಿರುತ್ತದೆ; ಹೆ./11-12ಟನ್ ಇಳುವರಿ ನೀಡಬಲ್ಲದು.

(iv) "ಅರ್ಕಾ ನೀಲ್ ಕಿರಣ್" ತಳಿಯನ್ನು ಅಲ್ಫಾಂಸೋ ಮತ್ತು ನೀಲಮ್ ತಳಿಗಳಿಂದ ರೂಪಿಸಿದೆ. ಹಣ್ಣಿನ ಸರಾಸರಿ ತೂಕ 260 ಗ್ರಾಂ; ಶೇ 6 ರಷ್ಟು ತಿರುಳಿರುತ್ತದೆ; ಸಿಪ್ಪೆ ನುಣುಪಾಗಿದ್ದು ಚಿನ್ನದ-ಹಳದಿ ಬಣ್ಣ ಹೊಂದಿರುತ್ತದೆ; ಮಾಗಿದ ಹಣ್ಣಿನ ತಿರುಳು ಕೆಂಪಗಿರುತ್ತದೆ. ಹೆ./ ಸುಮಾರು 12 ಟನ್ ಇಳುವರಿ ನೀಡಬಲ್ಲದು.



## 4 ಕೃಷಿ ಉತ್ಪಾದನೆ ಹೆಚ್ಚಿಸುವುದು ಅನಿವಾರ್ಯ :-

ಭಾರತೀಯ ಕೃಷಿ ಸಂಶೋಧನಾ ಮಂಡಳಿಯು ವಿವಿಧ ರಾಜ್ಯಗಳು ಭವಿಷ್ಯದಲ್ಲಿ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಕೆಲವೊಂದು ಸಲಹೆ–ಸೂಚನೆಗಳನ್ನು ಇತ್ತೀಚೆಗೆ ನಡೆದ ರಾಷ್ಟ್ರೀಯ ಕೃಷಿ ಸಮ್ಮೇಳನದಲ್ಲಿ ನೀಡಿದೆ. ವಿವಿಧ ರಾಜ್ಯಗಳ ಪ್ರತಿನಿಧಿಗಳು ಕೃಷಿ ರಂಗದಲ್ಲಿ ತಾವು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ವಿಚಾರ ವಿನಿಮಯ ಮಾಡಿಕೊಂಡರು. ಈ ಬಗ್ಗೆ ಕೈಗೊಳ್ಳಲಿರುವ ಕ್ರಮಗಳ ಬಗ್ಗೆಯೂ ದೇಶದ ಕೃಷಿಯನ್ನು ಆಧುನೀಕರಿಸುವ ಬಗ್ಗೆಯೂ ಚರ್ಚೆಗಳು ನಡೆದವು.

ಜನಸಂಖ್ಯಾ ಪೆಡಂಭೂತಕ್ಕೆ ಅನ್ನ ಒದಗಿಸಲು ಸುಧಾರಿತ ಕೃಷಿ ಪದ್ಧತಿಗಳು ಸಂಕರ ತಳಿಗಳು, ಆಧುನಿಕ ಕೃಷಿ ತಂತ್ರಜ್ಞಾನದ ಬಳಕೆ ಇಂದು ಅನಿವಾರ್ಯ. 1997ರ ಹೊತ್ತಿಗೆ ಭಾರತದ ಜನಸಂಖ್ಯೆ 94 ಕೋಟಿಗೆ ಮೀರುತ್ತದೆ. ಆಗ ನಮಗೆ 21 ಕೋಟಿ ಟನ್ ಆಹಾರ ಧಾನ್ಯ ಬೇಕಾಗುತ್ತದೆ. ಅಂದರೆ ಪ್ರತಿವರ್ಷ ನಾವು ಶೇ 3-5 ರಷ್ಟು ವೃದ್ಧಿದರವನ್ನು ಕೃಷಿ ಉತ್ಪಾದನೆಯಲ್ಲಿ ಸಾಧಿಸಬೇಕಾಗಿದೆ. ಈ ವೃದ್ಧಿ ಹೀಗೆ ಮುಂದುವರಿಯಬೇಕು. ಇದೇ ರೀತಿ ಎಣ್ಣೆ ಬೀಜಗಳ ಉತ್ಪಾದನೆ 23 ದಶಲಕ್ಷ ಟನ್ ಹಾಗೂ ಬೇಳೆಕಾಳುಗಳ ಉತ್ಪಾದನೆ 17 ದಶಲಕ್ಷ ಟನ್‌ವರೆಗೆ ವೃದ್ಧಿಯಾಗಬೇಕಾಗಿದೆ. ಈ ವೃದ್ಧಿದರವನ್ನು 1997ರ ವರೆಗೆ ಸಾಧಿಸಬೇಕಾಗಿದೆ.

ಆಂಧ್ರ ಪ್ರದೇಶದಲ್ಲಿ 85 ಸಾವಿರ ಹೆಕ್ಟೇರು ಭೂಮಿಯಲ್ಲಿ ಪಾಮ್ ಗಿಡಗಳನ್ನು ಬೆಳೆಸುವ ಗುರಿಯನ್ನು ಹೊಂದಲಾಗಿದ್ದು ಈಗಾಗಲೆ ಶೇ. 20 ರಷ್ಟು ಗುರಿ ಮುಟ್ಟಲಾಗಿದೆ. ಪಾಮ್ ಗಿಡಗಳನ್ನು ಬೆಳೆಸಲು ಕ್ರಮಗಳನ್ನು ಕೈಗೊಳ್ಳಲಾಗಿದೆ.

ಜೋಳದ ಮಾಗಿ ಬೆಳೆಯನ್ನು ಮಹಾರಾಷ್ಟ್ರದಲ್ಲಿ ಹೆಚ್ಚು ಹೆಚ್ಚು ಜನಪ್ರಿಯಗೊಳಿಸಲು ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಅಸ್ಸಾಂನಲ್ಲಿ ಗೋಧಿ 'ಸೊನಾಲಿ' ತಳಿಯನ್ನು ಜನಪ್ರಿಯಗೊಳಿಸಲು ಶಿಫಾರಸ್ಸುಗಳನ್ನು ಮಾಡಲಾಗಿದೆ. ಸೋಯಾಬಿನ್ ಬೆಳೆಯಲು ಸೂಕ್ತ ಕೃಷಿ ಹವಾಮಾನ ಇರುವೆಡೆಗಳಲ್ಲೆಲ್ಲಾ ಈ ಬೆಳೆಯನ್ನು ಹೆಚ್ಚು ಹೆಚ್ಚಾಗಿ ಇಡಬೇಕು. ಒರಿಸ್ಸಾದಲ್ಲಿ ಮಾಗಿ ಕಾಲದಲ್ಲಿ ನೆಲಗಡಲೆ (ಶೇಂಗಾ) ಬೆಳೆಯಬಹುದು. ಮಧ್ಯ ಪ್ರದೇಶದಲ್ಲಿ ಸೋಯಾಬೀನ ಬೆಳೆಗೆ ಬರುವ ಬಿಳಿ ಶಿಲೀಂದ್ರ ರೋಗ ನಿಯಂತ್ರಣಕ್ಕೆ ಕೆಲವು ಸಲಹೆಗಳನ್ನು ನೀಡಲಾಗಿದೆ; ಈ ವರ್ಷದ ಉತ್ಪನ್ನವನ್ನು ಮುಂದಿನ ವರ್ಷಕ್ಕಾಗಿ ಸಂಗ್ರಹಿಸದಿರಲು ತಿಳಿಸಲಾಗಿದೆ ರಾಜಾಸ್ಥಾನದಲ್ಲಿ ಬಾರ್ಲಿ ಬೆಳೆಯ ಬಗ್ಗೆ ಸಂಶೋಧನೆಗೆ ನೆರವಾಗಲು ಭಾರತೀಯ ಕೃಷಿ ಸಂಶೊಧನಾ ಮಂಡಳಿ ತೀರ್ಮಾನಿಸಿದೆ. ಹರಿಯಾಣದಲ್ಲಿ ಎಲ್ಲಿ ಸಾಧ್ಯವೋ ಅಲ್ಲೆಲ್ಲಾ ಬೇಗ ಕುಯ್ಲಿಗೆ ಬರುವ ಸಾಸಿವೆ ಹಾಗೂ ಕಡಲೆ ಬಿತ್ತಲು ಸಲಹೆ ನೀಡಲಾಗಿದೆ. ಪಂಜಾಬ್ ಮತ್ತು ಹಿಮಾಚಲ ಪ್ರದೇಶಗಳಿಗೂ ಹೂ ಕೋಸ್, ಸಾಸಿವೆ, ಕಡಲೆ, ಗೋಧಿ, ಕಬ್ಬು ಮುಂತಾದ ಬೆಳೆಗಳನ್ನು ಬೆಳೆಯಲು ಶಿಫಾರಸ್ಸುಗಳನ್ನು ಮಾಡಲಾಗಿದೆ.

ಇದುವರೆಗೆ ವಿವಿಧ ಬೆಳೆಗಳಲ್ಲಿ ಭಾರತೀಯ ಕೃಷಿ ಸಂಶೋಧನಾ ಮಂಡಳಿ 2,2000 ಸುಧಾರಿತ ತಳಿಗಳನ್ನು ಬಿಡುಗಡೆ ಮಾಡಿದೆ. ಪ್ರತಿ ವರ್ಷ ಸರಾಸರಿ ಸುಮಾರು 100 ತಳಿಗಳನ್ನು ವಿವಿಧ ಬೆಳೆಗಳಲ್ಲಿ ಬಿಡುಗಡೆ ಮಾಡಲಾಗುತ್ತಿದೆ. ಲಭ್ಯವಿರುವ ಇಂದುವರೆಗೆ ಅಧಿಕ ಇಳುವರಿ ತಳಿಗಿಂತ ಹೆಕ್ಟೇರಿಗೆ ಒಂದು ಟನ್ ಹೆಚ್ಚು ಭತ್ತದ ಇಳುವರಿ ನೀಡುವ ಭತ್ತದ ತಳಿಯನ್ನು ರೂಪಿಸಲಾಗಿದೆ.

ಬೇಳೆಕಾಳುಗಳ ಬೆಳೆ 90 ರಷ್ಟು ಮಳೆಯಾಧಾರಿತ ಪ್ರೇದೇಶದಲ್ಲಿದೆ. ಬೇಳೆಕಾಳುಗಳ ಉತ್ಪಾದನೆಯಲ್ಲಿ ಕೊಂಚ ಪ್ರಗತಿಯಾಗಿದೆ; 11 ದಶಲಕ್ಷ ಟನ್‌ನಿಂದ 14 ದಶಲಕ್ಷಟನ್ ಉತ್ಪಾದನೆ ಸಾಧ್ಯವಾಗಿದೆ. ಸುಧಾರಿತ ತಂತ್ರಜ್ಞಾನಗಳನ್ನು ಬಳಸಿ ಇವುಗಳ ಉತ್ಪಾದನೆಯನ್ನು ಇನ್ನೂ 3-4 ದಶಲಕ್ಷ ಟನ್‌ಗೆ ಹೆಚ್ಚಿಸಬಹುದು. ಸೋಯಾಬೀನ ಇಂದು ಮಾಂತ್ರಿಕ ಬೆಳೆಯಾಗಿ ರೂಪುಗೊಳ್ಳುತ್ತಿದೆ. ಈ ಬೆಳೆ ವಿಸ್ತರಿಸುತ್ತಿದೆ. ತೊಗರಿಯಲ್ಲಿ 120 ದಿನಗಳಲ್ಲಿ ಕುಯ್ಲಿಗೆ ಬರುವ ತಳಿಗಳು ಈಗ ಲಭ್ಯ, ಸೂಕ್ತ ತಂತ್ರಜ್ಞಾನ ಹಾಗೂ ಕೃಷಿಪದ್ಧತಿಗಳ ಬಳಕೆಯಿಂದ ಅದು ಸಾಧ್ಯವಾಗಿದೆ

**ಟೊಮ್ಯಾಟೋ ಕಾಯಿ ಕೊರೆಯುವ ಹುಳುವಿನ ನಿಯಂತ್ರಣ :-**

ಟೊಮ್ಯಾಟೊ ಕಾಯಿ ಕೊರೆಯುವ ಹುಳುವಿನ ಹಾವಳಿಯಿಂದ ದೇಶಾದ್ಯಂತ 17ರಿಂದ 80ರಷ್ಟು ಇಳುವರಿಯ ಹಾನಿಯಾಗುತ್ತಿದೆಯೆಂದು ಅಂದಾಜು ಮಾಡಲಾಗಿದೆ. ಇವುಗಳ ನಿಯಂತ್ರಣಕ್ಕಾಗಿ ಬೆಂಗಳೂರಿನ ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆಯು ಸಮಗ್ರ ಪಿಡುಗು ವ್ಯವಸ್ಥಾಪನಾ ತಂತ್ರಜ್ಞಾನವೊಂದನ್ನು ರೂಪಿಸಿದೆ.

ಟೋಮ್ಯೊಟೋನ ಸಸಿಗಳನ್ನು ಹದಿನಾರು ಸಾಲುಗಳ ಬಳಿಕ ಒಂದು ಸಾಲು ಆಫ್ರಿಕನ್ ಚೆಂಡುಹೂ ಸಸಿಗಳನ್ನು ನೆಟ್ಟು ಈ ಅಂತರ ಬೆಳೆಗೆ ನಾಟಿ ಮಾಡಿದ 28 ರಿಂದ 35 ದಿನಗಳ ಬಳಿಕ ಶೇ. 0.02 ಎಂಡೋಸಲ್ಫಾನ್ ಮದ್ದನ್ನು ಸಿಂಪಡಿಸಬೇಕು. ಈ ವಿಧಾನದಿಂದ ಟೊಮ್ಯೊಟೋ ಕಾಯಿ ಕೊರೆಯುವ ಹುಳುವಿನ ಹಾವಳಿ ಶೇ.6ಕ್ಕೆ ಇಳಿದಿದೆ. ಟೊಮ್ಯೊಟೋದ 25 ದಿನಗಳ ಸಸಿಯನ್ನೂ ಚೆಂಡು ಹೂವಿನ 40 ದಿನಗಳ ಸಸಿಯನ್ನೂ ಒಟ್ಟಾಗಿ ನೆಟ್ಟಾಗ ಎರಡು ಬೆಳೆಗಳು ಒಂದೇ ಸಾರಿಗೆ ಹೂ ಬಿಡುತ್ತವೆ. ವಾರಬಿಟ್ಟು ವಾರ ಕ್ರಿಮಿನಾಶಕಗಳ ಸಿಂಪಡಣಾ ಪದ್ಧತಿಯನ್ನು ಬೆಳೆ ಇಡುವವರು ಸದ್ಯದಲ್ಲಿ ಅನುಸರಿಸುತ್ತಿದ್ದಾರೆ. ಹೊಸ ಪದ್ಧತಿಯಿಂದ ಸುಮಾರು ೬ ಬಾರಿ ಕ್ರಿಮಿನಾಶಕಗಳ ಸಿಂಪರಣೆ ಕಡಿಮೆಯಾಗುತ್ತದೆ.

**4 ಧಿಡೀರ್ ಚಹಾ :-**

ಇಂದು ಎಲ್ಲವೂ ಕ್ಷಣಾರ್ಧದಲ್ಲಿ ಆಗಬೇಕಾದ ಧಿಡೀರ್ ಯುಗದಲ್ಲಿ ನಾವಿದ್ದೇವೆ ಯಾರಿಗೂ ಯವುದಕ್ಕೂ ಬಿಡುವೇ ಇಲ್ಲ. ಬಹುಶಃ ಯಾಂತ್ರಿಕ ಜೀವನದ ಬೇಡಿಕೆ ಇದು. ಚಹಾ + ಹಾಲಿನ ಪುಡಿ + ಸಕ್ಕರೆ — ಇವುಗಳ ಮಿಶ್ರಣವಿರುವ ಧಿಡೀರ್ ಚಹಾ ಪುಡಿಯನ್ನು ರಾಷ್ಟ್ರೀಯ ಹೈನು ಸಂಶೋಧನಾ ಸಂಸ್ಥೆಯು ಸಿದ್ಧಪಡಿಸಿದೆ. ಈ ನೂರರ ಸಾಂದ್ರೀಕೃತ ಮಿಶ್ರಣದಿಂದ ಧಿಡೀರ್‌ನೆ ಚಹಾ ತಯಾರಿಸಬಹುದು.

## ಟಿ. ಸಿ. ಹೆಚ್. ಹಳೆಯ ವಿದ್ಯಾರ್ಥಿಗಳ ಶಿಕ್ಷಕರ ಸಂಘ
## ಶ್ರೀ ಬಸವೇಶ್ವರ ಶಿಕ್ಷಕರ ತರಬೇತಿ ಸಂಸ್ಥೆ

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-572 104.

: ಮನವಿ :

- ಮೇಲಿನ ಶಿಕ್ಷಣ ಶಾಲೆಯ "ಬೆಳ್ಳಿಹಬ್ಬ"ವನ್ನು 1997 ಏಪ್ರಿಲ್‌ನಲ್ಲಿ ಆಚರಿಸಲು 3-3-1996 ಶ್ರೀ ಮಠದಲ್ಲಿ ಸಮಾವೇಶವಾಗಿದ್ದ ರಾಜ್ಯ ಮಟ್ಟದ ಸಭೆಯಲ್ಲಿ ತೀರ್ಮಾನಿಸಲಾಯಿತು.
- ತರಬೇತಿ ಸಂಸ್ಥೆ "ಬೆಳ್ಳಿ ಹಬ್ಬ" ಮತ್ತು ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ "ವಜ್ರಮಹೋತ್ಸವ ನಿಧಿಗೆ ಒಂದು ತಿಂಗಳ ವೇತನವನ್ನು 5-6 ಕಂತುಗಳಲ್ಲಿ ನೀಡಲು ಸಭೆ ನಿರ್ಧರಿಸಿತು.
- ಇದರಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಮಠದ ಟಿ ಸಿ. ಹೆಚ್. ಶಿಕ್ಷಣಾರ್ಥಿಗಳು ತಮ್ಮ ವಂತಿಕೆಗಳನ್ನು ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಹೆಸರಿನಲ್ಲಿ ಡಿ ಡಿ. ಪಡೆದು ಅಧೀಕ್ಷಕರ ವಿಳಾಸಕ್ಕೆ ಕಳುಹಿಸಿ ಕೊಡಿ.
- ನಿಮ್ಮ ಜೀವನವನ್ನು ಬೆಳಗಿಸಿದ ಸಿದ್ಧಗಂಗಾ ಶ್ರೀಗಳನ್ನು ಕೃತಜ್ಞತೆಯಿಂದ ಸ್ಮರಿಸಿ ಸೇವಾ ಸಾಗರದಲ್ಲಿ ಪಾಲ್ಗೊಳ್ಳಿ.
- ವಿ. ಸೂ:- ಸಭೆಯ ಗೊತ್ತುವಳಿಯೊಂದಿಗೆ ಒಪ್ಪಿಗೆ ಪತ್ರವನ್ನು ಎಲ್ಲಾ ಹಳೆಯ ಟಿ. ಸಿ. ಹೆಚ್. ಶಿಕ್ಷಕರಿಗೆ ರವಾನಿಸಿದೆ.

**ಗಮನಿಸಿ ! ಓದಿ, ಒಪ್ಪಿಗೆ ಪತ್ರಕ್ಕೆ ಸಹಿ ಹಾಕಿ ರವಾನಿಸಿ.**

| ಎಸ್. ಶಿವಕುಮಾರ್ | ಹೆಚ್. ಬಿ. ಗಂಗಾಧರಯ್ಯ | ಕೆ.ಸಿ. ಶಿವಗಂಗಯ್ಯ |
|---|---|---|
| ಕಾರ್ಯದರ್ಶಿಗಳು | ಸಂಚಾಲಕರು | ಅಧೀಕ್ಷಕರು |

---

### ಶ್ರದ್ಧಾಂಜಲಿ

ಪಂಡಿತ ಕೆ.ಪಿ ಶಿವಲಿಂಗಯ್ಯನವರು ಮೇ 27, 96 ಶಿವೈಕ್ಯರಾದರು. "ಸಿದ್ಧಗಂಗಾ" ತ್ರೈಮಾಸಿಕವಾಗಿ 1965 ರಲ್ಲಿ ಪ್ರಾರಂಭವಾದಾಗ ಸಹ ಸಂಪಾದಕರಾಗಿ ಪತ್ರಿಕೆಯ ಮುನ್ನಡೆಗಾಗಿ ಶ್ರಮಿಸಿ ಸಹಕಾರ ನೀಡಿದ್ದಾರೆ. ಸಾಹಿತ್ಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಜನಪ್ರಿಯತೆ ಗಳಿಸಿದ್ದರು. ಶಿವೈಕ್ಯರ ಆತ್ಮಕ್ಕೆ ಬಸವಾದಿ ಪ್ರಮಥ ಶರಣರು ಶಾಂತಿಯನ್ನು ಕರುಣಿಸಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

---

ಸ್ಥಾಪನೆ: 1943 ತಂತಿ : 'ವೀರಶೈವ'

ಕೆ.ಎಸ್.ಟಿ. 73606285
ಸಿ.ಎಸ್.ಟಿ. 73656288 } ದಿ 24-8-62

ಕೇಂದ್ರ ಕಛೇರಿ : { 72866, 70204

ಮಿನಿ ಬಜಾರ್: 351114

## ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009.

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.

ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1994-95 ನೇ ಸಾಲಿನಲ್ಲಿ ಷೇರು ಬಂಡವಾಳ :

| | | |
|---|---|---|
| ಸದಸ್ಯರಿಂದ | ರೂ. | 9.00 ಲಕ್ಷ |
| ಸರ್ಕಾರದಿಂದ | ರೂ. | 14-32 ಲಕ್ಷ |
| ಒಟ್ಟು | ರೂ. | 23.32 ಲಕ್ಷ |

| | | |
|---|---|---|
| 1) ಸದಸ್ಯರ ಸಂಖ್ಯೆ | : | 5451 |
| 2) ಸಗಟು ಮತ್ತು ಚಿಲ್ಲರೆ ಮಾರಾಟ | : | ರೂ. 2,115.30 ಲಕ್ಷ |
| 3) ಆಪದ್ಧನ | : | ರೂ. 12.98 ಲಕ್ಷ |
| 4) ಇತರೆ ನಿಧಿಗಳು | : | ರೂ. 194.12 ಲಕ್ಷ |
| 5) 1994-95 ರಲ್ಲಿ ನಿವ್ವಳ ಲಾಭ | : | ರೂ. 2.01 ಲಕ್ಷ |

6) ಸದಸ್ಯರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 2 ರಿಯಾಯಿತಿ

ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಮತ್ತು ಸೋಮೇಶ್ವರಪುರದಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್‌ಗಳಿವೆ.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ.ಟಿ. ಉಮೇಶ್
ಅಧ್ಯಕ್ಷರು
2) ಶ್ರೀ ಆರ್. ನೀಲಕಂಠಯ್ಯ
ಉಪಾಧ್ಯಕ್ಷರು

-: ನಿರ್ದೇಶಕರು :-

3) ಶ್ರೀ ಬಿ. ಎಸ್. ಪರಮಶಿವಯ್ಯ
4) ಶ್ರೀ ಎಲ್.ಎಸ್. ಕುಮಾರಸ್ವಾಮಿ
5) ಶ್ರೀ ಗುರುನಂಜಯ್ಯ
6) ಶ್ರೀ ಜಿ. ಶಿವಕುಮಾರ್
7) ಶ್ರೀ ಎಲ್. ರಾಜಪ್ಪ
8) ಶ್ರೀ ಹೆಚ್.ಎಸ್. ಶಿವಲಿಂಗಯ್ಯ
9) ಶ್ರೀ ಬಿ.ಎಂ ಶ್ರೀಕಂಠಸ್ವಾಮಿ
10) ಶ್ರೀ ಸಿ. ಕೆ. ಬಸವರಾಜು
11) ಶ್ರೀ ಬಿ. ಜಿ. ನಾಗಬಸಪ್ಪ
12) ಶ್ರೀಮತಿ ಎಸ್. ಗಿರಿಜ
13) ಶ್ರೀ ಬಿ.ಎಸ್. ಕೆಂಪರಾಜು ಸ.ನಾ.ನಿ.
14) ಶ್ರೀಮತಿ ಮಮತಾವಿಶ್ವನಾಥ್ ಸ.ನಾ.ನಿ.
15) ಶ್ರೀ ಎಲ್. ಗೋವಿಂದರಾಜು ಸ.ನಾ.ನಿ.
16) ಶ್ರೀಮತಿ N.S. ಸೌಭಾಗ್ಯಮ್ಮ ಬಿ.ಡಿ.ಸಿ.ಸಿ.ನಿ.
17) ಶ್ರೀ ಎ. ಪ್ರಸನ್ನಕುಮಾರಸ್ವಾಮಿ
ಪ್ರಧಾನ ವ್ಯವಸ್ಥಾಪಕರು.

"ಮಾಟಕೂಟ" ಎಂಬ ಮಾತು ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ನೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯನಿದ್ದರೆ ನಿಂದಿರಲೊಲ್ಲ ಕೂಡಲಸಂಗಮದೇವಾ.

–ಶ್ರೀ ಬಸವೇಶ್ವರ

" SIDDAGANGA MONTHLY Reg. No. KRNQ - 9

ಶ್ರೀ ಸಿದ್ಧಗಂಗಾ ಬಸವತತ್ತ್ವ ಪ್ರಯೋಗ ಶಾಲೆ
ಶ್ರೀ ಶ್ರೀಗಳವರ ವಜ್ರ ಮಹೋತ್ಸವ ಸ್ಮಾರಕ ಸೌಧಗಳು



ನೂತನ ಮಹಾದಾಸೋಹ ಪ್ರಸಾದ ನಿಲಯ



ನೂತನ ಬೃಹತ್ ವಸತಿ ಮಂದಿರ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ - 572 104.